KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು



| ಸಂಪುಟ ೧೪೨ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೬, ೨೦೦೭ (ಭಾದ್ರಪದ ೧೫, ಶಕ ವರ್ಷ ೧೯೨೯) | ಸಂಚಿಕೆ ೩೬ |
|---|---|---|



## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ವಿ.ವಿ.ಪುಣೇದ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:-**
1. ನೋಟೀಸ್ ಸಂಖ್ಯೆ:ಸಿಆಸುಇ 46 ಎಸ್‌ಇಎನ್ 07 ದಿನಾಂಕ:09.05.2007.
2. ಶ್ರೀ ವಿ.ವಿ.ಪುಣೇದ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ದಿನಾಂಕ:15.05.2007ರ ಉತ್ತರ.

**ಪ್ರಸ್ತಾವನೆ:-**

ಶ್ರೀ ವಿ.ವಿ.ಪುಣೇದ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರು ಬೀದರ್ ಜಿಲ್ಲೆ, ಔರಾದ್ ತಾಲ್ಲೂಕು ಪಂಚಾಯತ್‌ನಲ್ಲಿ ಕಾರ್ಯನಿರ್ವಾಹಕ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಅನಧಿಕೃತವಾಗಿ ಗೈರು ಹಾಜರಾಗಿರುವ ಆರೋಪಕ್ಕಾಗಿ ಅವರಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ:09.05.07ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಆರೋಪಿತರು ನೋಟೀಸಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ:15.05.07ರಂದು ಉತ್ತರ ಸಲ್ಲಿಸಿ, ತಮ್ಮ ಮೇಲೆ ಮಾಡಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 46 ಎಸ್‌ಇಎನ್ 07, ಬೆಂಗಳೂರು, ದಿನಾಂಕ:21ನೇ ಜುಲೈ 2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು, ಶ್ರೀ ವಿ.ವಿ.ಪುಣೇದ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಮಾಡಲಾದ ಆರೋಪಗಳು ಕುರಿತಂತೆ ವಿಚಾರಣೆ ಮಾಡಲು ಶ್ರೀ ವಿ.ಪಿ.ಕೇದಿಲಾಯ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 16 ಸೇಇವಿ 05 ದಿನಾಂಕ:23.08.2005 ರನ್ವಯ ರೂ.6,000/- ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ದಿನಾಂಕ:04.03.2002 ರಂತೆ ರೂ.1000/- ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು

ಚಲಾಯಿಸಿ ಸರ್ಕಾರವು ಉಪ ಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ಬೀದರ್ ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1374 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಅಬ್ದುಲ್ ಖಯ್ಯೂಂ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ– ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 60 ಎಸ್ಇಎನ್ 02 ದಿನಾಂಕ:08.06.2004.
2 ಶ್ರೀ ಬಿ.ರಂಗಸ್ವಾಮಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಅವರ ವಿಚಾರಣಾ ವರದಿ ದಿನಾಂಕ:08.11.2004.
3 ನೋಟೀಸ್ ಸಂಖ್ಯೆ:ಸಿಆಸುಇ 60 ಎಸ್ಇಎನ್ 02 ದಿನಾಂಕ:29.03.2007.
4 ಶ್ರೀ ಅಬ್ದುಲ್ ಖಯ್ಯೂಂ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ಉತ್ತರ ದಿನಾಂಕ: 19.05.2007.

**ಪ್ರಸ್ತಾವನೆ:**

ನಾಗನಾಯಕನ ಕೋಟೆ ಸ.ನಂ.75/1ರಲ್ಲಿ 0.39 ಗುಂಟೆ ಜಮೀನಿನ ಖಾತೆ ಶ್ರೀ ಗೋಪಣ್ಣ ಎಂಬುವವರ ಹೆಸರಿನಲ್ಲಿದ್ದರೂ ಸಹ ಶ್ರೀ ಹೆಚ್.ವೆಂಕಟರಾಮಯ್ಯ ಇವರು ಪಾಲು ಪಟ್ಟಿಯ ಪ್ರಕಾರ ಅವರಿಗೆ ಸೇರಿರುತ್ತದೆ ಎಂಬ ವಿವಿದಾಸ್ಪದ ಬಗ್ಗೆ ಆಗಿನ ಹೊಸಕೋಟೆ ತಾಲ್ಲೂಕು ತಹಶೀಲ್ದಾರರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಅಬ್ದುಲ್ ಖಯ್ಯೂಂ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರು ದುರ್ನಡತೆ ಎಸಗಿದ್ದಾರೆ ಎಂಬ ಆಪಾದನೆ ಮೇರೆಗೆ ಇವರ ವಿರುದ್ಧ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

ನಾಗನಾಯಕನ ಕೋಟೆ ಸ.ನಂ.75/1ರಲ್ಲಿ 0.39 ಗುಂಟೆ ಜಮೀನಿನ ಖಾತೆಯು ಶ್ರೀ ಗೋಪಣ್ಣ ಎಂಬುವವರ ಹೆಸರಿನಲ್ಲಿದ್ದು, ಪಹಣಿ ಕಾಲಂನಲ್ಲಿ ಅವರ ಹೆಸರನ್ನು ನಮೂದು ಮಾಡಬೇಕಾಗಿರುತ್ತದೆ. ಆದರೆ, ವಿವಾದಾಸ್ಪದ ಪ್ರಕರಣದಲ್ಲಿ ದಿನಾಂಕ:06.01.93ರಲ್ಲಿ ಮಾಡಿರುವ ಆದೇಶದಲ್ಲಿ ಖಾತೆದಾರರ ವಿರುದ್ಧವಾಗಿ ಅನಧಿಕೃತ ವ್ಯಕ್ತಿ ಶ್ರೀ ಹೆಚ್.ವೆಂಕಟರಾಮಯ್ಯರವರ ಹೆಸರನ್ನು ಪಹಣಿ ಕಲಂನಲ್ಲಿ ನಮೂದು ಮಾಡಲು ಆದೇಶ ಮಾಡಿ ಕರ್ತವ್ಯಲೋಪ ಎಸಗಿ ಅಧಿಕಾರ ದುರುಪಯೋಗಪಡಿಸಿಕೊಂಡಿರುವುದು.

ಈ ಆಪಾದನೆ ಕುರಿತು ವಿಚಾರಣೆ ನಡೆಸಲು ಮೇಲೆ (1)ರಲ್ಲಿ ಓದಲಾದ ದಿನಾಂಕ:08.06.2004ರ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಬಿ.ರಂಗಸ್ವಾಮಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆಯನ್ನು ಪೂರ್ತಿಗೊಳಿಸಿದ ವಿಚಾರಣಾಧಿಕಾರಿಯವರು ಮೇಲೆ (2)ರಲ್ಲಿ ಓದಲಾದ ದಿನಾಂಕ:08.11.2004ರ ವಿಚಾರಣಾ ವರದಿಯನ್ನು ಸಲ್ಲಿಸಿ, ಆಪಾದಿತರ ವಿರುದ್ಧ ಆರೋಪವು ಸಾಬೀತಾಗಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ.

ವಿಚಾರಣಾಧಿಕಾರಿಯವರ ವರದಿಯನ್ನು ಪರಿಶೀಲಿಸಲಾಗಿದೆ. ಈ ಕೆಳಕಂಡ ಕಾರಣಗಳಿಗಾಗಿ ವಿಚಾರಣಾ ವರದಿಯನ್ನು ಒಪ್ಪದೇ ಇರಲು ಆಪಾದಿತರ ಅಹವಾಲನ್ನು ಕೇಳಿ ಮೇಲೆ (3)ರಲ್ಲಿ ಓದಲಾದ ದಿನಾಂಕ:29.03.07ರ 2ನೇ ಕಾರಣ ಕೇಳುವ ನೋಟೀಸನ್ನು ನೀಡಲಾಗಿತ್ತು.

1) ಸಿವಿಲ್ ನ್ಯಾಯಾಲಯದಲ್ಲಿ ವ್ಯಾಜ್ಯ ಇದ್ದರೆ ಇಬ್ಬರ ಹೆಸರಿಗೂ ಆರ್.ಟಿ.ಸಿ. ಮಾಡಕೂಡದು. ಹಿಂದಿನ ತಹಶೀಲ್ದಾರ್‌ರ ಆದೇಶದಂತೆ ಮರು ಆದೇಶ ಮಾಡಲು ಎ.ಸಿ.ಯವರು ಈ ಪ್ರಕರಣವನ್ನು ಆಪಾದಿತ ಅಧಿಕಾರಿಗೆ ಕಳುಹಿಸಿರಲಿಲ್ಲ. ಮರುವಿಚಾರಣೆಗೆ ರಿಮ್ಯಾಂಡ್ ಮಾಡಲಾಗಿತ್ತು.
2) ಸದರಿಯಾಗಿ ವಿಚಾರಣೆ ಮಾಡದೇ ಹಿಂದಿನದ್ದನ್ನೇ ಮುಂದುವರಿಸಿರುವುದು ಸರಿಯಾಗಿರುವುದಿಲ್ಲ.
3) ಶ್ರೀ ಹೆಚ್.ವೆಂಕಟರಾಮಯ್ಯನವರು ಉಳುಮೆ ಮಾಡುತ್ತಿದ್ದರು ಎಂಬುದಕ್ಕೆ ಏನು ಆಧಾರವಿತ್ತು ಎಂಬುದನ್ನು ಸ್ಪಷ್ಟವಾಗಿ ಹೇಳಿರುವುದಿಲ್ಲ.

ಈ ಬಗ್ಗೆ ಆಪಾದಿತರು ನೀಡಿರುವ ವಿವರಣೆಯನ್ನು ಲಭ್ಯವಿರುವ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸ್ವಾಭಾವಿಕ ನ್ಯಾಯದ ಪ್ರಕಾರ ಈ ಪ್ರಕರಣದಲ್ಲಿ ಸಿವಿಲ್ ದಾವೆ ಬಾಕಿ ಇದ್ದುದರಿಂದ ಅದರ ಅಂತಿಮ ತೀರ್ಪನ್ನು ಕಾಯಬಹುದಾಗಿತ್ತು. ಆದರೆ, ವಿವಾದಾತ್ಮಕ ಅರ್ಜಿದಾರರ ಹೆಸರನ್ನು ಕಲಂ 12 ರಲ್ಲಿ ಅನುಭವದಲ್ಲಿರುವವರೆಂದು ನಮೂದಿಸಲು ಆದೇಶಿಸಿರುತ್ತಾರೆ. ಈ ಪ್ರಕರಣವನ್ನು ಆಪಾದಿತರಿಗೆ remand ಮಾಡಿ ನ್ಯಾಯಬದ್ಧವಾದ ವಿಚಾರಣೆ ನಡೆಸಲು ಮಾಡಿರುವ ಆದೇಶವು ಸಫಲವಾಗಿರುವುದಿಲ್ಲ. ಹಿಂದಿನ ತಹಶೀಲ್ದಾರ್‌ರ ಆದೇಶದಂತೆ ಮರು ಆದೇಶ ಮಾಡಲು ಯಾವುದೇ ಸಕಾರಣಗಳು ಕಂಡು ಬರುತ್ತಿಲ್ಲ. ಹಾಗೂ ಸಿವಿಲ್ ನ್ಯಾಯಾಲಯದಲ್ಲಿ ವ್ಯಾಜ್ಯ ನಡೆಯುತ್ತಿದ್ದರೂ ಸಹ ಈ ರೀತಿ ನಿರ್ಣಯವನ್ನು ತೆಗೆದುಕೊಂಡಿರುವುದು ಸಹ ಸಮಂಜಸವಾಗಿ ಕಾಣುತ್ತಿಲ್ಲ. ಶ್ರೀ ಹೆಚ್.ವೆಂಕಟರಾಮಯ್ಯ ಅವರು ಉಳುಮೆ ಮಾಡುತ್ತಿದ್ದರು

ಎಂಬುದಕ್ಕೆ ಆಪಾದಿತರು ಹಾಜರುಪಡಿಸಿರುವ ಮಹಜರ್ ಅಲ್ಲದೆ ಬೇರೆ ಯಾವುದೇ ದಾಖಲೆಗಳು ಇರುವುದಿಲ್ಲ. ಈ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಆಪಾದಿತರು ಸಲ್ಲಿಸಿರುವ ಅಹವಾಲಿನಲ್ಲಿ ಯಾವುದೇ ಸಮರ್ಥನೆ ಇಲ್ಲದಿರುವುದರಿಂದ ಅವರ ವಿರುದ್ಧ ಆರೋಪ ಸಾಬೀತಾಗಿಲ್ಲವೆಂಬ ವರದಿ ನೀಡಿರುವ ವಿಚಾರಣಾಧಿಕಾರಿಯವರ ವರದಿಯನ್ನು ಒಪ್ಪದೇ ಆರೋಪಿತರ ವಿರುದ್ಧ ಮಾಡಲಾದ ಆರೋಪ ಸಾಬೀತಾಗಿದೆಯೆಂದು ಸರ್ಕಾರವು ತೀರ್ಮಾನಕ್ಕೆ ಬಂದು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 60 ಎಸ್‌ಇಎನ್ 2002, ಬೆಂಗಳೂರು, ದಿನಾಂಕ: 24ನೇ ಜುಲೈ 2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(ii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು, ಶ್ರೀ ಅಬ್ದುಲ್ ಖಯ್ಯೂಂ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರಿಗೆ **"ವಾಗ್ದಂಡನೆ"** (Censure) ವಿಧಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವಮೂರ್ತಿ**
ಪಿ.ಆರ್. 1375 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಎ.ಪಿ.ಕೇರಪ್ಪನವರ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಮತ್ತು ಇತರರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ–ವಿಚಾರಣೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 66 ಎಸ್‌ಇಎನ್ 2002 ದಿನಾಂಕ:09.08.2004.
2 ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 66 ಎಸ್‌ಇಎನ್ 2002 ದಿನಾಂಕ:19.02.2005.
3 ಶ್ರೀ ಎಂ.ಎನ್.ಗದಗ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಧಾರವಾಡ ಅವರ ವಿಚಾರಣಾ ವರದಿ ದಿನಾಂಕ:23.05.2006.
4 ಸರ್ಕಾರದ ಪತ್ರ ಸಂಖ್ಯೆ:ಸಿಆಸುಇ 66 ಎಸ್‌ಇಎನ್ 2002 ದಿನಾಂಕ:16.04.2007.
5 ಶ್ರೀ ಎಂ.ಎನ್.ಗದಗ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಧಾರವಾಡ ಅವರ ಪತ್ರ ದಿನಾಂಕ:09.05.2007.

**ಪ್ರಸ್ತಾವನೆ:–**

ಬೆಳಗಾವಿ ಜಿಲ್ಲೆ, ಹಿಡಕಲ್ ಡ್ಯಾಮ್ ಯೋಜನೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನಿನ ಪೈಕಿ ಹುಕ್ಕೇರಿ ತಾಲ್ಲೂಕಿನ ಜಿನರಾಳ ಗ್ರಾಮದ ಸ.ನಂ.58/1, 58/2 ಮತ್ತು 59/2ರ ಸಂಬಂಧ ಬೆಳಗಾವಿ ಜಿಲ್ಲಾ ನ್ಯಾಯಾಲಯ ನೀಡಿರುವ ತೀರ್ಪಿನ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಲು ವಿಳಂಬ ಮಾಡಿರುವ ಅಧಿಕಾರಿಗಳ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳಲು ಎಂ.ಎಸ್.ಎ. ಸಂಖ್ಯೆ:26/02ರಲ್ಲಿ ಉಚ್ಚ ನ್ಯಾಯಾಲಯವು ನೀಡಿರುವ ತೀರ್ಪಿನಲ್ಲಿ ಆದೇಶಿಸಿರುತ್ತದೆ. ಸದರಿ ಆದೇಶದಲ್ಲಿ 20.03.92 ರಿಂದ 07.07.2000ರವರೆಗೆ ಹಿಡಕಲ್ ಯೋಜನೆಯಲ್ಲಿ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಈ ಕೆಳಕಂಡ ಅಧಿಕಾರಿ/ನೌಕರರುಗಳ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ:09.08.04ರಂದು ಜಂಟಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಎಂ.ಎನ್.ಗದಗ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಧಾರವಾಡ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಬೆಳಗಾಂ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಲಾಗಿತ್ತು.

1) ಶ್ರೀ ಎ.ಪಿ.ಕೇರಪ್ಪನವರ್, ಕೆಎಎಸ್,
2) ಶ್ರೀ ಬಿ.ಎಂ.ಹಲಗತ್ತಿ, ಕೆಎಎಸ್,
3) ಶ್ರೀ ಎಂ.ವಿ.ಗೊಂಗಡಶೆಟ್ಟಿ, ಕೆಎಎಸ್,
4) ಶ್ರೀ ಎಂ.ಎಸ್.ವಾಲೀಕರ್, ಕೆಎಎಸ್,
5) ಶ್ರೀ ಎನ್.ಹೆಚ್.ಸೂಳೇಭಾವಿ, ಕೆಎಎಸ್,
6) ಶ್ರೀ ಎ.ಜೆ.ಧುಮಾಳೆ, ಕೆಎಎಸ್,
7) ಶ್ರೀ ಎ.ಎಸ್.ಹೊಸಮನಿ, ಪ್ರಥಮ ದರ್ಜೆ ಸಹಾಯಕರು,
8) ಶ್ರೀ ಜಿ.ಬಿ.ಜಹಜ, ಪ್ರಥಮ ದರ್ಜೆ ಸಹಾಯಕರು.

ಮೇಲ್ಕಂಡ ಆರೋಪಿತರಲೊಬ್ಬರಾದ ಶ್ರೀ ಎ.ಜೆ.ಧುಮಾಳೆ ಅವರು ಈ ಪ್ರಕರಣದಲ್ಲಿ ಭಾಗಿಯಾಗದೇ ಇರುವುದು ನಂತರ ಕಂಡು ಬಂದ ಕಾರಣ ಮೇಲೆ (2)ರಲ್ಲಿ ಓದಲಾದ ದಿನಾಂಕ:19.02.2005ರ ಆದೇಶದಲ್ಲಿ ಅವರನ್ನು ಶಿಸ್ತು ಕ್ರಮದ ವ್ಯಾಪ್ತಿಯಿಂದ ಕೈಬಿಡಲಾಗಿದೆ.

ವಿಚಾರಣೆಯನ್ನು ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (3)ರಲ್ಲಿ ಓದಲಾದ ದಿನಾಂಕ:23.05.2006ರಂದು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿದ್ದು, ವಿಚಾರಣೆಯು ದಿ:06.01.06ರಂದು ಶಿಸ್ತು ಪ್ರಾಧಿಕಾರಿಯ ಪರ ಎಲ್ಲಾ ಸಾಕ್ಷಿಗಳ ವಿಚಾರಣೆಯನ್ನು ಮುಗಿಸಿ ಅದೇ ದಿನ ಒಂದನೇ ಆಪಾದಿತ ಅಧಿಕಾರಿಯ ಸಾಕ್ಷಿ ಹೇಳಿಕೆಯನ್ನು ದಾಖಲಿಸಲಾಗಿದೆ. ಇಷ್ಟು ತರಾತುರಿಯಲ್ಲಿ ಹೇಳಿಕೆಯನ್ನು ದಾಖಲಿಸಿರುವುದರಿಂದ ಮಂಡನಾಧಿಕಾರಿಯವರಿಗೆ ಪೂರ್ಣ ಪ್ರಮಾಣದ ಅವಕಾಶ ನಿರಾಕರಿಸಿದಂತಾಗಿದ್ದು, ಹಾಗೂ ಸಿ.ಸಿ.ಎ.

ನಿಯಮ 11(15)ರನ್ವಯ ಅಗತ್ಯತೆಯನ್ನು ಪರಿಗಣಿಸಿ ಹೆಚ್ಚಿನ ಸಾಕ್ಷಿಗಳನ್ನು ಅಂದರೆ ಅಡ್ವೊಕೇಟ್ ಜನರಲ್ ಕಛೇರಿಗೆ ಸಂಬಂಧಪಟ್ಟ ಸಾಕ್ಷಿಗಳನ್ನು ವಿಚಾರಣೆಗೆ ಕರೆಸಲು ಮಂಡನಾಧಿಕಾರಿಯವರಿಗೆ ಸೂಕ್ತ ಅವಕಾಶ ನೀಡಿದ್ದಲ್ಲಿ ಆರೋಪಿಗಳ ಬಗ್ಗೆ ಸಮರ್ಪಕ ವಿಚಾರಣೆ ನಡೆಸಲು ಸಾಧ್ಯವಾಗುತ್ತಿದ್ದ ಕಾರಣಗಳ ಮೇರೆಗೆ ಈ ಇಲಾಖಾ ವಿಚಾರಣೆಯನ್ನು ಸಮರ್ಪಕವಾಗಿ ನಡೆಸಿಲ್ಲವೆಂದು ತೀರ್ಮಾನಿಸಿ ಸಿ.ಸಿ.ಎ. ನಿಯಮ 11(14)ರ ಹಂತದಿಂದ ಮುಂದುವರಿದ ವಿಚಾರಣೆಯನ್ನು ಮುಂದುವರಿಸುವಂತೆ ಮೇಲೆ (4)ರಲ್ಲಿ ಓದಲಾದ ದಿನಾಂಕ:16.04.2007ರ ಸರ್ಕಾರಿ ಪತ್ರದಲ್ಲಿ ವಿಚಾರಣಾಧಿಕಾರಿಗಳನ್ನು ಕೋರಲಾಗಿತ್ತು. ವಿಚಾರಣಾಧಿಕಾರಿಗಳು ಮೇಲೆ (5)ರಲ್ಲಿ ಓದಲಾದ ದಿನಾಂಕ:09.05.2007ರಂದು ಉತ್ತರ ನೀಡಿ ದಿನಾಂಕ:09.08.2004ರ ಆದೇಶದನ್ವಯ ಇಲಾಖಾ ವಿಚಾರಣೆಯನ್ನು ಅಂತಿಮಗೊಳಿಸಿ ಅಂತಿಮ ವರದಿಯನ್ನು ದಿನಾಂಕ:23.05.2006ರಂದು ಸಲ್ಲಿಸಲಾಗಿದ್ದು, ಮುಂದುವರಿದ ಇಲಾಖಾ ವಿಚಾರಣೆಯನ್ನು ಮಾಡುವುದಕ್ಕೆ ತಮ್ಮ ಸಹಮತಿ ಇರುವುದಿಲ್ಲವೆಂದು ತಿಳಿಸಿ, ಬೇರೊಬ್ಬ ವಿಚಾರಣಾಧಿಕಾರಿಯನ್ನು ನೇಮಿಸುವಂತೆ ಕೋರಿರುತ್ತಾರೆ. ಇವರ ಕೋರಿಕೆಯನ್ನು ಪರಿಶೀಲಿಸಿ ಪರಿಗಣಿಸಿದ ಸರ್ಕಾರವು ಬೇರೊಬ್ಬ ವಿಚಾರಣಾಧಿಕಾರಿ/ಮಂಡನಾಧಿಕಾರಿಯನ್ನು ನೇಮಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 66 ಎಸ್ಇಎನ್ 2002, ಬೆಂಗಳೂರು ದಿನಾಂಕ: 24ನೇ ಜುಲೈ 2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಶ್ರೀ ಎ.ಪಿ.ಕೇರಪ್ಪನವರ್, ಕೆಎಎಸ್ ಅಧಿಕಾರಿ ಮತ್ತು ಇತರರುಗಳ ವಿರುದ್ಧ ಮಾಡಲಾದ ಆರೋಪಗಳ ವಿಚಾರಣೆ ನಡೆಸಿ ವಿಚಾರಣಾಧಿಕಾರಿಗಳು ಸಲ್ಲಿಸಿದ ವಿಚಾರಣಾ ವರದಿಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(14)ರ ಹಂತದಿಂದ ಮುಂದುವರಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು, ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ, ಧಾರವಾಡ ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ಮಂಡಿಸಲು ಮಂಡನಾಧಿಕಾರಿಯಾಗಿ ಬೆಳಗಾಂ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರು ಅವರೇ ಮುಂದುವರಿಯುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಎಂ. ವಾಸುದೇವಮೂರ್ತಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

ಪಿ.ಆರ್. 1377

**ವಿಷಯ:** ಶ್ರೀ ಐ.ಎಂ.ಪ್ರಭಾಕರ್, ಕೆಎಎಸ್ ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ– ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂಖ್ಯೆ:ಸಿಆಸುಇ 60 ಎಸ್ಇಎನ್ 01 ದಿನಾಂಕ:23.03.2007.
2. ಶ್ರೀ ಐ.ಎಂ.ಪ್ರಭಾಕರ್, ಕೆಎಎಸ್ ಅಧಿಕಾರಿ ಅವರ ಉತ್ತರ ದಿನಾಂಕ:21.04.2007.

**ಪ್ರಸ್ತಾವನೆ:**

ಶ್ರೀ ಐ.ಎಂ.ಪ್ರಭಾಕರ್, ಕೆಎಎಸ್ ಅಧಿಕಾರಿ ಅವರು ಬೀದರ್ ಜಿಲ್ಲಾ ಪಂಚಾಯತ್‌ನಲ್ಲಿ ಮುಖ್ಯ ಯೋಜನಾ ಅಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದಾಗ, ದಿ:09.03.2000 ರಿಂದ 15.04.2000 ರವರೆಗೆ ರಜೆ ಅರ್ಜಿಯನ್ನು ತಿರಸ್ಕರಿಸಲಾಗಿದ್ದರೂ ವೈದ್ಯಕೀಯ ಆಧಾರದ ಮೇಲೆ ರಜೆಗೆ ಅರ್ಜಿ ಹಾಕಿ ಕರ್ತವ್ಯಕ್ಕೆ ಗೈರು ಹಾಜರಾದ ಆರೋಪ, ದಿ:19.08.2000ರಂದು ಮುಧೋಳ್ ಮುಖಾಂತರ ಮುದ್ದೇಬಿಹಾಳಕ್ಕೆ ಹೋಗುವುದಾಗಿ ಪ್ರವಾಸ ಕಾರ್ಯಕ್ರಮದಲ್ಲಿ ತಿಳಿಸಿದ್ದರೂ ಅನಧಿಕೃತವಾಗಿ ಗೈರು ಹಾಜರಾಗಿ ಉಳಿದ ಆರೋಪ ಹಾಗೂ ಆ ಬಗ್ಗೆ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರು ವಿವರಣೆಯನ್ನು ಕೋರಲಾಗಿ ವಿವರಣೆ ಸಲ್ಲಿಸಲು ವಿಫಲರಾದ ಆರೋಪ, ದಿ:17.08.2000ರಂದು ಜಿಲ್ಲಾ ಪಂಚಾಯತ್‌ನ ಸಾಮಾನ್ಯ ಸಭೆಯಲ್ಲಿ ಶಾಸಕರುಗಳಿಂದ ಕಟು ಟೀಕೆಗೆ ಗುರಿಯಾಗಿ ತಮ್ಮ ಕರ್ತವ್ಯದಲ್ಲಿ ಬೇಜವಾಬ್ದಾರಿತನ ತೋರಿಸಿದ ಆರೋಪ, ಜಿಲ್ಲೆಯ ಕರಡು ಯೋಜನೆಯನ್ನು ಸಕಾಲದಲ್ಲಿ ಸಲ್ಲಿಸುವಲ್ಲಿ ವಿಫಲರಾದ ಆರೋಪ, ದಿ:02.09.2000 ರಿಂದ 16.09.2000 ರವರೆಗೆ ಮಗನ ವೈದ್ಯಕೀಯ ಚಿಕಿತ್ಸೆಗಾಗಿ ರಜೆ ಮಂಜೂರು ಮಾಡಬೇಕು ಎಂದು ಬೆಂಗಳೂರಿನಿಂದ ಫ್ಯಾಕ್ಸ್ ಮುಖಾಂತರ ಅರ್ಜಿ ಸಲ್ಲಿಸಿ ಪ್ರಭಾರ ವ್ಯವಸ್ಥೆ ಮಾಡದೆ ಸರ್ಕಾರದ ಕೆಲಸಕ್ಕೆ ತೊಂದರೆ ಉಂಟು ಮಾಡಿದ ಆರೋಪ, ದಿ:16.09.2000 ರಂದು ಮಾನ್ಯ ಮುಖ್ಯಮಂತ್ರಿಯವರ ಬಿಜಾಪುರ ಜಿಲ್ಲೆಯ ಪ್ರಗತಿ ಪರಿಶೀಲನಾ ಸಭೆಗೆ ಗೈರು ಹಾಜರಾಗಿ ಉಳಿದ ಆರೋಪಗಳಿಗಾಗಿ ಅವರಿಗೆ ಮೇಲೆ (1)ರಲ್ಲಿ ಓದಲಾದ ದಿ:23.03.2007ರ ನೋಟೀಸ್ ಹಾಗೂ ದೋಷಾರೋಪಣೆಗಳನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರನ್ವಯ ಜಾರಿ ಮಾಡುವುದರ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ಆರೋಪಿತರು ಮೇಲೆ (2)ರಲ್ಲಿ ಓದಲಾದ ದಿ:21.04.2007ರಂದು ಉತ್ತರ ಸಲ್ಲಿಸಿ, ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 436 ಸೇಆಸೇ 91 ದಿ:10.09.92ರನ್ವಯ ಕೆಎಎಸ್ ಅಧಿಕಾರಿಗಳಿಗೆ ಗಳಿಕೆ ರಜೆ ಮಂಜೂರು ಮಾಡುವ ಅಧಿಕಾರವನ್ನು ಜಿಲ್ಲಾ ಪಂಚಾಯತ್ ವ್ಯವಸ್ಥೆಯಲ್ಲಿ ಜಿಲ್ಲಾ ಪಂಚಾಯಿತಿಯ ಅಧ್ಯಕ್ಷರಿಗೆ ಅಧಿಕಾರವಿರುತ್ತದೆ ಹಾಗೂ ಕರ್ತವ್ಯಕ್ಕೆ ಮರಳಿ ಬರುವಂತೆ ನಿರ್ದೇಶಿಸುವ ಅಧಿಕಾರವೂ ಸಹ ಜಿಲ್ಲಾ ಪಂಚಾಯಿತಿಯ ಅಧ್ಯಕ್ಷರಿಗೆ ಇರುವುದು ಕಂಡು ಬರುತ್ತದೆ. ಜಿಲ್ಲಾ ಪಂಚಾಯಿತಿಯ

ಅಧ್ಯಕ್ಷರು ತಾವು ಮರಳಿ ಕೆಲಸಕ್ಕೆ ಹಾಜರಾಗುವಂತೆ ಯಾವುದೇ ಆದೇಶವನ್ನು ನೀಡಿರುವುದಿಲ್ಲ. ಶ್ರೀ ಐ.ಎಂ.ಪ್ರಭಾಕರ್ ರವರು ಒಂದು ಅನಿವಾರ್ಯ ಮತ್ತು ನಿಯಂತ್ರಕ್ಕೆ ಮೀರಿದ ಸನ್ನಿವೇಶದಲ್ಲಿ ಕರ್ತವ್ಯಕ್ಕೆ ಹಾಜರಾಗಿಲ್ಲದ ಕಾರಣ ಹಾಗೂ ಇಂತಹ ಸ್ಥಿತಿಯಲ್ಲಿನ ಅನುಪಸ್ಥಿತಿಯು ದುರ್ನಡತೆಯೆಂದು ಪರಿಗಣಿಸಲು ಬರುವುದಿಲ್ಲವೆಂಬ ಕಾರಣದ ಮೇಲೆ ಅವರು ಸಲ್ಲಿಸಿದ ವೈದ್ಯಕೀಯ ಸರ್ಟಿಫಿಕೇಟುಗಳ ಆಧಾರದ ಮೇಲೆ ಅವರಿಗೆ ರಜೆ ಮಂಜೂರು ಮಾಡುವುದು ಮಾನವೀಯ ದೃಷ್ಟಿಯಿಂದಲೂ ಅಗತ್ಯವೆಂದು ಅವರು ಸಲ್ಲಿಸಿದ ಅಪೀಲನ್ನು ಅಂಗೀಕರಿಸಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಹೊರಡಿಸಿದ ದಿ:22.03.2000ರ ಆದೇಶವನ್ನು ರದ್ದುಗೊಳಿಸಿ ದಿ:15.03.2000 ರಿಂದ 16.04.2000ರವರೆಗೆ ರಜೆಯನ್ನು ಮಂಜೂರು ಮಾಡಿರುತ್ತಾರೆ. ಮುಧೋಳಕ್ಕೆ ಬೆಳಿಗ್ಗೆ 9.00 ಗಂಟೆಗೆ ಪ್ರಯಾಣಿಸುತ್ತೇನೆಂದು ತೋರಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ. ಈ ಕ್ಷೇತ್ರವು ತಮ್ಮ ವ್ಯಾಪ್ತಿಗೆ ಬರುವುದಿಲ್ಲ. ಮುದ್ದೆಬಿಹಾಳಕ್ಕೆ ಹೋಗುವುದಾಗಿ ತಿಳಿಸಿ ಅದರಂತೆ ಪ್ರಯಾಣ ಮಾಡಿರುವುದಾಗಿ ತಿಳಿಸಿರುತ್ತಾರೆ. ತಾವು ಮತ್ತು ಮುಖ್ಯ ಜಿಲ್ಲಾ ಪಂಚಾಯಿತಿಯ ಮುಖ್ಯ ಲೆಕ್ಕಾಧಿಕಾರಿಗಳು ಒಟ್ಟಿಗೆ ಪ್ರವಾಸ ಕಾರ್ಯಕ್ರಮದಲ್ಲಿ ಭಾಗವಹಿಸಿರುವುದಾಗಿ ಜಿಲ್ಲಾ ಪಂಚಾಯತ್ ಅಧ್ಯಕ್ಷರವರು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಕಾರ್ಯದರ್ಶಿಯವರಿಗೆ ಬರೆದ ಪತ್ರದಲ್ಲಿ ತಿಳಿಸಿರುತ್ತಾರೆ. ಅವರು ಒಬ್ಬ ದಕ್ಷ, ಪ್ರಾಮಾಣಿಕ ಮತ್ತು ಉತ್ತಮ ದರ್ಜೆಯ ಅಧಿಕಾರಿಯಾಗಿದ್ದು, ಜಿಲ್ಲಾ ಪಂಚಾಯಿತಿಯ ಎಲ್ಲಾ ಸದಸ್ಯರಿಗೆ, ಶಾಸಕರಿಗೆ ಇವರ ಬಗ್ಗೆ ಸದಾಭಿಪ್ರಾಯವಿದೆ. ಇವರ ಕೆಲಸ ತೃಪ್ತಿದಾಯಕವಿದೆ. ಅನಾರೋಗ್ಯ ಸ್ಥಿತಿಯಲ್ಲಿ ಅವಶ್ಯಕ ಯೋಜನೆಗಳನ್ನು ಸಿದ್ದಪಡಿಸಿ ಕೊಟ್ಟಿದ್ದಾರೆ. ಕ್ರಿಯೆ ಯೋಜನೆಗಳನ್ನು ತಯಾರಿಸಿ ಸಭೆಗಳಲ್ಲಿ ಮಂಡಿಸುತ್ತಾ ಬಂದಿದ್ದಾರೆ. ಇತ್ತೀಚೆಗೆ ಜಿಲ್ಲಾ ಪಂಚಾಯಿತಿಯಲ್ಲಿನ ಖರೀದಿ ವಿಷಯದಲ್ಲಿ ತನಿಖೆ ನಡೆಸಿ ಲಕ್ಷಾಂತರ ರೂಪಾಯಿಗಳ ಹಗರಣ ಬಯಲಿಗೆ ಹಾಕಿದ್ದಾರೆಂದು ತಿಳಿಸಿದ್ದಾರೆ. ಹಾಗೂ ದಿ:28.08.2000ರಂದು ತಮ್ಮ ಮಗ ಧಾರವಾಡದಲ್ಲಿದ್ದಾಗ, ಅಪಘಾತದಲ್ಲಿ ತೀವ್ರವಾಗಿ ಗಾಯಗೊಂಡಿರುವ ವಿಷಯ ಗೊತ್ತಾದಾಗ ರಜೆ ಹಾಕಿರುವುದಾಗಿ ತಿಳಿಸಿ, ನಂತರ ಅವನ ವೈದ್ಯಕೀಯ ಚಿಕಿತ್ಸೆಯಲ್ಲಿ ಬಿಡುವಿಲ್ಲದೆ ನಿರತನಾಗಬೇಕಾಗಿದ್ದರಿಂದ ಕಛೇರಿಯ ಕೆಲಸದ ಕಾರ್ಯಭಾರ ವಹಿಸಿಕೊಡಲಾಗಲಿಲ್ಲವೆಂದು ತಿಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ತಮ್ಮ ಉತ್ತರವನ್ನು ಒಪ್ಪಿ ತಮ್ಮನ್ನು ಆರೋಪಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಆರೋಪಿತರ ಉತ್ತರವನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಅಧಿಕಾರಿಯವರು ಆಗಿಂದಾಗ್ಗೆ ಪೂರ್ವಾನುಮತಿ ಪಡೆಯದೆ ರಜೆಯ ಮೇಲೆ ತೆರಳಿದ್ದರೆಂದು, ಮುಖ್ಯವಾದ ಸಭೆಗಳಲ್ಲಿ ಗೈರು ಹಾಜರಾಗಿದ್ದಾರೆಂದು ಅಭಿಯೋಜಿಸಲಾಗಿದ್ದು, ಆದರೆ ಸದರಿ ಗೈರು ಹಾಜರಿಯ ಅವಧಿಯನ್ನು ಈಗಾಗಲೇ ಕ್ರಮಬದ್ಧಗೊಳಿಸಲಾಗಿರುವುದರಿಂದ ಹಾಗೂ ಇವರ ಹೇಳಿಕೆಯಲ್ಲಿ ತುರ್ತು ಪರಿಸ್ಥಿತಿಗಳಲ್ಲಿ ಕಛೇರಿಯ ಮುಖ್ಯಸ್ಥರುಗಳಿಗೆ ದೂರವಾಣಿ ಮೂಲಕ ಮನವಿ ಮಾಡಿ ರಜೆಯ ಮೇಲೆ ತೆರಳಿದ್ದಾರೆಂದು ಹಾಗೂ ಸೆಪ್ಟೆಂಬರ್ 2000 ಮಾಹೆಯಲ್ಲಿ ಅವರ ಪುತ್ರನಿಗೆ ಅಪಘಾತವಾಗಿ ಪ್ರಜ್ಞಾಹೀನ ಸ್ಥಿತಿಯಲ್ಲಿದ್ದು, ಅವನ ವೈದ್ಯೋಪಚಾರಕ್ಕಾಗಿ ಖುದ್ದಾಗಿ ಕೇಂದ್ರಸ್ಥಾನವನ್ನು ಬಿಡಬೇಕಾಗಿದ್ದರಿಂದ ರಜೆಯನ್ನು ಮಂಜೂರು ಮಾಡಿಕೊಳ್ಳಲು ಸಾಧ್ಯವಾಗಲಿಲ್ಲವೆಂದು ತಿಳಿಸಿರುವ ಅಂಶವನ್ನು ಗಮನದಲ್ಲಿಟ್ಟುಕೊಂಡು ಮಾನವೀಯ ಆಧಾರದ ಮೇಲೆ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 60 ಎಸ್‌ಇಎನ್ 2001, ಬೆಂಗಳೂರು ದಿನಾಂಕ:24ನೇ ಜುಲೈ 2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು ಶ್ರೀ ಐ.ಎಂ.ಪ್ರಭಾಕರ್, ಕೆಎಎಸ್ ಅಧಿಕಾರಿ ಅವರನ್ನು ದಿನಾಂಕ:23.03.2007ರ ನೋಟೀಸಿನಲ್ಲಿ ಮಾಡಲಾದ ಆರೋಪದಿಂದ ಆರೋಪಮುಕ್ತರನ್ನಾಗಿಸುತ್ತದೆ ಹಾಗೂ ಇನ್ನು ಮುಂದೆ ಇಂತಹ ಪ್ರಸಂಗಗಳಿಗೆ ಅವಕಾಶ ನೀಡದಂತೆ ಜಾಗರೂಕರಾಗಿರಬೇಕೆಂದು ಅವರಿಗೆ ಈ ಮೂಲಕ ಎಚ್ಚರಿಕೆ ನೀಡುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

ಪಿ.ಆರ್. 1378

**ವಿಷಯ:** ಶ್ರೀ ಆರ್.ಕೆ.ಬೇಗಾರ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂಖ್ಯೆ:ಸಿಆಸುಇ 77 ಎಸ್‌ಇಎನ್ 07 ದಿ:27.03.07.
2. ಶ್ರೀ ಆರ್.ಕೆ.ಬೇಗಾರ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ದಿ:24.04.2007ರ ಉತ್ತರ.

**ಪ್ರಸ್ತಾವನೆ:**

ಶ್ರೀ ಆರ್.ಕೆ.ಬೇಗಾರ್, ನಿವೃತ್ತ ಕೆಎಎಸ್ ಅಧಿಕಾರಿ ಅವರು ಸಹಾಯಕ ಆಯುಕ್ತರು, ಯಾದಗಿರಿ ಹಾಗೂ ಸುರಪುರ ತಾಲ್ಲೂಕಿನ ಭೂನ್ಯಾಯ ಮಂಡಳಿ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಸುರಪುರ ತಾಲ್ಲೂಕಿನ ಬೊಮ್ಮನಹಳ್ಳಿ ಗ್ರಾಮದ ಸ.ನಂ.42ರ 12.35 ಎಕರೆ ಜಮೀನಿನ ಗೇಣಿ ಮಂಜೂರಾತಿ ಸಂಬಂಧಿಸಿದಂತೆ ಸುರಪುರ ತಾಲ್ಲೂಕಿನ ಭೂನ್ಯಾಯ ಮಂಡಳಿಯ

ಪ್ರಕರಣವೊಂದರಲ್ಲಿ ಕರ್ನಾಟಕ ಉಚ್ಛ ನ್ಯಾಯಾಲಯದ ರಿಟ್ ಅರ್ಜಿಯಲ್ಲಿ ನೀಡಿದ ಆದೇಶದಲ್ಲಿನ ನಿರ್ದೇಶನದನ್ವಯ ಪ್ರಕರಣವನ್ನು ನಡೆಸದೇ ಕಾನೂನುಬಾಹಿರವಾಗಿ ಆದೇಶ ಹೊರಡಿಸಿರುವ ಆರೋಪ ಹಾಗೂ ಸುರಪುರ ತಾಲ್ಲೂಕಿನ ಭೂನ್ಯಾಯ ಮಂಡಳಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಸದರಿ ಹುದ್ದೆಗೆ ಶ್ರೀ ಎಸ್.ಪಿ.ಕುಲಕರ್ಣಿ, ಭೂಸ್ವಾಧೀನಾಧಿಕಾರಿ, ಭೀಮರಾಯನಗುಡಿ ರವರು ವರ್ಗಾವಣೆಗೊಂಡಿರುವುದನ್ನು ಮನಗಂಡು ಜಮೀನಿನ ಮಾಲೀಕರ ಪರ ನ್ಯಾಯವಾದಿಗಳಿಗೆ ವಾದ ಮಂಡಿಸಲು ಅವಕಾಶ ನೀಡದೇ ಗೇಣಿದಾರರ ಪರ ತೀರ್ಪು ನೀಡುವ ದುರುದ್ದೇಶದಿಂದ ಪೂರ್ವಭಾವಿ ತನಿಖೆ ನಿಗದಿಪಡಿಸದೇ ಸಂಬಂಧಪಟ್ಟ ವ್ಯಕ್ತಿಗಳಿಗೆ ಆತುರಾತುರದಿಂದ ಕಾನೂನುಬಾಹಿರವಾಗಿ ಏಕಪಕ್ಷೀಯವಾಗಿ ನಿರ್ಣಯ ಕೈಗೊಂಡಿರುವ ಆರೋಪಗಳಿಗಾಗಿ ಅವರಿಗೆ ಮೇಲೆ (1)ರಲ್ಲಿ ಓದಲಾದ ದಿ:27.03.07ರ ನೋಟೀಸನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರನ್ವಯ ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಸದರಿ ಅಧಿಕಾರಿಯು ಮೇಲೆ (2)ರಲ್ಲಿ ಓದಲಾದ ದಿ:24.04.07ರ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಅವರ ಮೇಲೆ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 77 ಎಸ್‌ಇಎನ್ 2007 ಬೆಂಗಳೂರು, ದಿನಾಂಕ:21ನೇ ಜುಲೈ 2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಆರ್.ಕೆ. ಬೇಗಾರ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಮಾಡಲಾದ ಆರೋಪಗಳ ಕುರಿತು ವಿಚಾರಣೆ ಮಾಡಲು ಹೆಚ್ಚುವರಿ ಪ್ರಾದೇಶಿಕ ಆಯುಕ್ತರು, ಪ್ರಾದೇಶಿಕ ಆಯುಕ್ತರ ಕಛೇರಿ, ಗುಲ್ಬರ್ಗಾ ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಉಪ ವಿಭಾಗಾಧಿಕಾರಿ, ಯಾದಗಿರಿ ಉಪ ವಿಭಾಗ, ಯಾದಗಿರಿ ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1379

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು-3).

**ವಿಷಯ:** ಶ್ರೀ ಬಿ.ಜಿ.ಮಾಳಿಗೇರ್, ನಿವೃತ್ತ ಮುಖ್ಯ ಇಂಜಿನಿಯರ್ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ನೇಮಕಗೊಂಡ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ಬದಲಾಯಿಸುವ ಬಗ್ಗೆ-ಪರಿಷ್ಕೃತ ಆದೇಶ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 85 ಎಸ್‌ಇಎನ್ 98 ದಿನಾಂಕ:06.10.2005.

**ಪ್ರಸ್ತಾವನೆ:**

ಶ್ರೀ ಬಿ.ಜಿ.ಮಾಳಿಗೇರ್, ನಿವೃತ್ತ ಮುಖ್ಯ ಇಂಜಿನಿಯರ್ ರವರು ಧಾರವಾಡದಲ್ಲಿರುವ ಜಲ ಮತ್ತು ನೆಲ ನಿರ್ವಹಣಾ ಸಂಸ್ಥೆಯ ನಿರ್ದೇಶಕರಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಆಡಳಿತ ಮಂಡಳಿಯ ಅನುಮೋದನೆ ಪಡೆಯದೇ ವಾಲ್ಮಿ ಸಂಸ್ಥೆಯ ಹೆಸರನ್ನು ಬದಲಾಯಿಸಿ ನಾಮಫಲಕ ಲೆಟರ್ ಪ್ಯಾಡ್, ಪ್ರಿಂಟಿಂಗ್ ಬಗ್ಗೆ ರೂ.12,73,702/- ಅನಗತ್ಯ ವೆಚ್ಚ ಕಾನೂನು ಬಾಹಿರವಾಗಿ ಗ್ರೂಪ್ ಸಿ ಮತ್ತು ಡಿ ಹುದ್ದೆಗಳಿಗೆ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿರುವುದು, ಆಡಳಿತ ಮಂಡಳಿ ಅನುಮೋದನೆ ಪಡೆಯದೆ ರೂ.1,05,64,989/- ಸಾಮಗ್ರಿಗಳನ್ನು ಅನಗತ್ಯವಾಗಿ ಖರೀದಿಸಿರುವುದು ಹಾಗೂ ಗ್ರೂಪ್ ಎ,ಬಿ,ಸಿ,ಡಿ, ಹುದ್ದೆಗಳ ನೇಮಕಾತಿಗೆ ಪತ್ರಿಕೆಗಳಲ್ಲಿ ಜಾಹಿರಾತು ಬಾಬ್ತು ರೂ.8,72,148/- ಅನಗತ್ಯ ವೆಚ್ಚ ಮಾಡಿರುವುದು, ಸರ್ಕಾರದ ಸೂಚನೆ ಮೀರಿ ರಾಜ್ಯದಿಂದ ಹೊರಗೆ ವಿಮಾನಯಾನ ರೂ.80,423/- ವೆಚ್ಚ ಮಾಡಿದ ಆರೋಪಗಳಿಗಾಗಿ ಶ್ರೀ ಬಿ.ಜಿ.ಮಾಳಿಗೇರ್, ನಿವೃತ್ತ ಮುಖ್ಯ ಇಂಜಿನಿಯರ್ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಮೇಲೆ ಓದಲಾದ ದಿನಾಂಕ:06.10.2005ರ ಸರ್ಕಾರಿ ಆದೇಶದಲ್ಲಿ ಶ್ರೀ ಆರ್.ಪಿ.ಚಟ್ನಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಶ್ರೀ ಆರ್.ಚೆಲುವರಾಜು, ಸೂಪರಿಂಟೆಂಡಿಂಗ್ ಇಂಜಿನಿಯರ್, ಎಂ.ಆರ್.ಬಿ.ಸಿ.ಸಿ. ವೃತ್ತ, ಧಾರವಾಡ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಆದರೆ, ಶ್ರೀ ಆರ್.ಪಿ.ಚಟ್ನಿ ಇವರು ವೈಯಕ್ತಿಕ ಕಾರಣದಿಂದಾಗಿ ವಿಚಾರಣೆಯನ್ನು ನಡೆಸಲು ಅಸಹಾಯಕತೆ ತೋರಿಸಿದ್ದರಿಂದ, ಆಡಳಿತಾತ್ಮಕ

ಹಿತದೃಷ್ಟಿಯಿಂದ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ಬದಲಾಯಿಸುವುದು ಸೂಕ್ತವೆಂದು ಸರ್ಕಾರವು ನಿರ್ಧರಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 85 ಎಸ್ಇಎನ್ 98 ಬೆಂಗಳೂರು, ದಿನಾಂಕ:24ನೇ ಜುಲೈ 2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಶ್ರೀ ಬಿ.ಜಿ.ಮಾಳಿಗೇರ್, ನಿವೃತ್ತ ಮುಖ್ಯ ಇಂಜಿನಿಯರ್ ಇವರ ವಿರುದ್ಧ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 11(2) ರಲ್ಲಿ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು, ನಿಯಮ 214 ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ದಿನಾಂಕ:06.10.2005 ಸಂಖ್ಯೆ:ಸಿಆಸುಇ 85 ಎಸ್ಇಎನ್ 98ರ ಆದೇಶದಲ್ಲಿ ನೇಮಕ ಮಾಡಿದ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯವರನ್ನು ಬದಲಾಯಿಸಿ, **ಪ್ರಾದೇಶಿಕ ಆಯುಕ್ತರು, ಬೆಳಗಾಂ** ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ, ನಿಯಮ 11(5)ರನ್ವಯ **ಕಾರ್ಯಪಾಲಕ ಅಭಿಯಂತರರು, ವಾಲ್ಮಿ, ಧಾರವಾಡ** ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸುತ್ತದೆ.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು 3 ತಿಂಗಳೊಳಗಾಗಿ ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ ಒದಗಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1392 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

**ವಿಷಯ:** ಶ್ರೀ ಡಿ.ಬಸವರಾಜು, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ– ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಕಂಇ 75 ಎಡಿಇ 95 ದಿನಾಂಕ:01.01.1998.
2. ಉಪ ವಿಭಾಗಾಧಿಕಾರಿ, ತರೀಕೆರೆ ಹಾಗೂ ವಿಚಾರಣಾಧಿಕಾರಿಗಳು ಇವರ ವಿಚಾರಣಾ ವರದಿ ಸಂಖ್ಯೆ:ಸಿಸಿಎ/8/97–98 ದಿನಾಂಕ:22.01.2000.

**ಪ್ರಸ್ತಾವನೆ:–**

ಚಿಕ್ಕಮಗಳೂರು ಜಿಲ್ಲೆ, ತರೀಕೆರೆ ತಾಲ್ಲೂಕು ಕಛೇರಿಯಲ್ಲಿ ಶ್ರೀ ಡಿ.ಬಸವರಾಜು, ಕೆಎಎಸ್ ಅಧಿಕಾರಿ ಅವರು ತಹಶೀಲ್ದಾರ್ ಹುದ್ದೆಯಲ್ಲಿ ಶ್ರೀ ವಿ.ಗಂಗಾಧರಪ್ಪ, ರಾಜಸ್ವ ನಿರೀಕ್ಷಕರು ಅವರು ರಾಜಸ್ವ ನಿರೀಕ್ಷಕರ ಹುದ್ದೆಯಲ್ಲಿ ಮತ್ತು ಶ್ರೀ ಡಿ.ಟಿ.ಲಕ್ಷ್ಮೀಶ ಅವರು ಗ್ರಾಮ ಲೆಕ್ಕಿಗರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಚಿಕ್ಕಮಗಳೂರು ಜಿಲ್ಲೆ, ತರೀಕೆರೆ ತಾಲ್ಲೂಕು, ಹದಿಕೆರೆ ಗ್ರಾಮದ ಶಿವಮ್ಮ ಕೋಂ ಮರಳುಸಿದ್ದಪ್ಪ ಇವರಿಗೆ ಸ್ವಂತ ಹಿಡುವಳಿ ಜಮೀನು ಇದ್ದರೂ ಸದರಿ ಗ್ರಾಮದ ಸ.ನಂ.188ರಲ್ಲಿ 3.00 ಎಕರೆ ಜಮೀನನ್ನು ಬಗರ್ ಹುಕುಂ ಕಾನೂನಿನನ್ವಯ ಮಂಜೂರು ಮಾಡಲು ಕಾರಣರಾಗಿರುವುದಲ್ಲದೆ ಇನ್ನೂ 0.14 ಗುಂಟೆ ಜಮೀನು ಮಂಜೂರು ಆಗಲು ಸಹಕರಿಸಿದ ಹಾಗೂ ರಂಗಾಪುರದ ಗ್ರಾಮದ ವಾಸಿ ಶ್ರೀ ಎಸ್.ರಾಮೇಗೌಡ ಎಂಬುವವರಿಗೆ ಸುಳ್ಳು ಆದಾಯ ಪತ್ರ ನೀಡಲು ಕಾರಣರಾದ ಆರೋಪಕ್ಕಾಗಿ ಮೇಲ್ಕಂಡ ಅಧಿಕಾರಿ/ನೌಕರರುಗಳಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ:01.01.98ರ ಆದೇಶದಲ್ಲಿ ಕಂದಾಯ ಇಲಾಖೆಯು ಇಲಾಖಾ ವಿಚಾರಣೆಯನ್ನು ಆದೇಶಿಸಿ ತರೀಕೆರೆ ಉಪ ವಿಭಾಗಾಧಿಕಾರಿಗಳನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ:22.01.2000ರಂದು ವಿಚಾರಣಾ ವರದಿಯನ್ನು ಕಂದಾಯ ಇಲಾಖೆಗೆ ಸಲ್ಲಿಸಿ, ಶ್ರೀ ಡಿ.ಬಸವರಾಜು, ಕೆಎಎಸ್ ಅಧಿಕಾರಿ, ಹಿಂದಿನ ತಹಶೀಲ್ದಾರ್ ಮತ್ತು ಶ್ರೀ ಡಿ.ಟಿ.ಲಕ್ಷ್ಮೀಶ ಅವರುಗಳ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು, ಶ್ರೀ ವಿ.ಗಂಗಾಧರಪ್ಪ, ಕಂದಾಯ ನಿರೀಕ್ಷಕರು ಅವರ ವಿರುದ್ಧ ಮಾಡಲಾದ ಆರೋಪ ಸಾಬೀತಾಗಿದೆಯೆಂಬ ನಿರ್ಣಯ ನೀಡಿರುತ್ತಾರೆ. ವಿಚಾರಣಾ ವರದಿಯನ್ನು ಪರಿಶೀಲಿಸಿ ಪರಿಗಣಿಸಿದ ಕಂದಾಯ ಇಲಾಖೆಯು ತನ್ನ ವ್ಯಾಪ್ತಿಯಲ್ಲಿ ಬರುವ ಶ್ರೀ ಡಿ.ಟಿ.ಲಕ್ಷ್ಮೀಶ ಮತ್ತು ಶ್ರೀ ವಿ.ಗಂಗಾಧರಪ್ಪ, ಕಂದಾಯ ನಿರೀಕ್ಷಕರು ಅವರುಗಳಿಗೆ ಸಂಬಂಧಿಸಿದಂತೆ ದಿನಾಂಕ:22.05.2001ರಂದು ದಂಡನೆ ವಿಧಿಸಿ ಆದೇಶ ಹೊರಡಿಸಿರುತ್ತದೆ. ಶ್ರೀ ಡಿ.ಬಸವರಾಜು ಅವರಿಗೆ ಸಂಬಂಧಿಸಿದಂತೆ ವಿಚಾರಣಾಧಿಕಾರಿಗಳು ಈ ಕೆಳಕಂಡಂತೆ ನಿರ್ಣಯ ನೀಡಿರುತ್ತಾರೆ:–

**ಆರೋಪ-1:-** ಆರೋಪಿತರು ಹಾಜರುಪಡಿಸಿದ ಕಡತದಲ್ಲಿನ ಮಂಜೂರಾತಿ ಕಡತದ ಅಹವಾಲು ತ:ಖ್ತೆಯನ್ನು ಪರಿಶೀಲಿಸಿದಾಗ ಅರ್ಜಿದಾರರ ಪತಿ ಶ್ರೀ ಮರುಳುಸಿದ್ದಪ್ಪ ಬಿನ್ ಜಟ್ಟಪ್ಪ ರವರಿಗೆ ಗ್ರಾಮ ಲೆಕ್ಕಾಧಿಕಾರಿ ಹಾಗೂ ರಾಜಸ್ವ ನಿರೀಕ್ಷಕರು ದೃಢೀಕರಿಸಿರುವ ಅಹವಾಲು ತ:ಖ್ತೆಯಂತೆ ಅರ್ಜಿದಾರರಿಗೆ ಜಮೀನು ಇರುವುದಿಲ್ಲವೆಂದು ತಿಳಿದು ಬಂದಿರುತ್ತದೆ. ಆರೋಪಿತ ಅಧಿಕಾರಿ ಮಂಜೂರು ದಾರರಿಗೆ ಹೆಚ್ಚುವರಿಯಾಗಿ ಜಮೀನು ಮಂಜೂರು ಮಾಡದೇ ಇರುವುದರಿಂದ ಅವರ ಮೇಲೆ ಹೊರಿಸಲಾದ ಆರೋಪವು ಸಾಬೀತಾಗಿರುವುದಿಲ್ಲ.

**ಆರೋಪ-2:-** ಸರ್ಕಾರದ ಪರ ಹಾಜರುಪಡಿಸಿದ ಸಾಕ್ಷಿಯು ಆರೋಪಿತ ಅಧಿಕಾರಿ ಅರ್ಜಿದಾರ ರಾಮೇಗೌಡರು ಹೆಚ್ಚುವರಿ ಜಮೀನನ್ನು ಹೊಂದಿರುತ್ತಾರೆಂಬ ಬಗ್ಗೆ ಸಂಬಂಧಿಸಿದ ಅಧಿಕಾರಿಗೆ ವಾರ್ಷಿಕ ಆದಾಯ ದೃಢೀಕರಣ ಪತ್ರ ನೀಡುವ ಮುನ್ನ ಅಗತ್ಯ ದಾಖಲೆಗಳೊಂದಿಗೆ ಗಮನಕ್ಕೆ ತಂದ ಬಾಬ್ತು ಯಾವುದೇ ದಾಖಲೆಗಳನ್ನು ಹಾಜರುಪಡಿಸಿರುವುದಿಲ್ಲ. ಇಂತಹ ಸಂದರ್ಭದಲ್ಲಿ ತಹಶೀಲ್ದಾರರು ಅಧೀನ ಅಧಿಕಾರಿಗಳ ಅಥವಾ ನೌಕರರ ವರದಿಯನ್ನು ಆಧರಿಸಿ ದೃಢೀಕರಣ ನೀಡುವುದು ಅನಿವಾರ್ಯವಾಗಿರುವುದರಿಂದ ಆರೋಪಿತ ಅಧಿಕಾರಿಯು ಉದ್ದೇಶಪೂರ್ವಕವಾಗಿ ತಪ್ಪು ಎಸಗಿರುತ್ತಾರೆಂದು ಕಂಡು ಬಾರದೇ ಇರುವುದರಿಂದಲೂ ಮತ್ತು ಸದರಿ ಅರ್ಜಿದಾರರಾದ ರಾಮೇಗೌಡರವರು ಹೆಚ್ಚು ಆದಾಯ ಹೊಂದಿರುವುದನ್ನು ಹಾಜರುಪಡಿಸಿದ ಸಾಕ್ಷಿಯು ದಾಖಲೆಗಳ ಮೂಲಕ ಸಾಬೀತು ಮಾಡಲು ವಿಫಲರಾಗಿರುವುದರಿಂದ ಈ ಆರೋಪವು ಸಾಬೀತಾಗಿರುವುದಿಲ್ಲ.

ವಿಚಾರಣಾ ವರದಿಯನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಯಿತು. ಶ್ರೀ ಡಿ.ಬಸವರಾಜು ಅವರು ಕೇವಲ ಗ್ರಾಮ ಲೆಕ್ಕಿಗ ಮತ್ತು ರಾಜಸ್ವ ನಿರೀಕ್ಷಕರ ವರದಿಯನ್ನು ಆಧರಿಸದೆ ಬಗರ್ ಹುಕುಂ ಜಮೀನು ಮಂಜೂರಾತಿಯಂತಹ ಗುರುತರವಾದ ವಿಷಯದಲ್ಲಿ ಸ್ಥಳ ತನಿಖೆ ಮಾಡೀ ನಿರ್ಧರಿಸಬೇಕಾಗಿತ್ತು. ಇಂತಹ ಗುರುತರವಾದ ಜವಾಬ್ದಾರಿಯನ್ನು ಅವರು ಮಾಡದೇ ಇರುವುದು ಲೋಪವೆಸಗಿದಂತಾಗುತ್ತದೆ. ಆದರೆ, ಈ ಲೋಪವನ್ನು ದುರುದ್ದೇಶದಿಂದ ಎಸಗಿದ್ದಾರೆಂಬುದಕ್ಕೆ ಯಾವುದೇ ಆಧಾರವಿಲ್ಲ. ಆದ್ದರಿಂದ ವಿಚಾರಣಾ ವರದಿಯನ್ನು ಒಪ್ಪಿಕೊಂಡ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 78 ಎಸ್ಇಎನ್ 2001, ಬೆಂಗಳೂರು, ದಿನಾಂಕ: 24ನೇ ಜುಲೈ 2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು, ಶ್ರೀ ಡಿ.ಬಸವರಾಜು, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರನ್ನು ಸರ್ಕಾರದ ಆದೇಶ ಸಂಖ್ಯೆ:ಕಂಇ 75 ಎಡಿಇ 95 ದಿನಾಂಕ:01.01.1998ರ ಸರ್ಕಾರಿ ಆದೇಶದಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ ಹಾಗೂ ಇನ್ನು ಮುಂದೆ ಕರ್ತವ್ಯವನ್ನು ಹೆಚ್ಚು ಜಾಗರೂಕತೆಯಿಂದ ನಿರ್ವಹಿಸಲು ತೀವ್ರವಾದ ಎಚ್ಚರಿಕೆಯನ್ನು ಈ ಮೂಲಕ ನೀಡಲಾಗಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1398 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀಮತಿ ಪುಷ್ಪರಾಣಿ, ನಿವೃತ್ತ ಸರ್ಕಾರದ ಉಪ ಕಾರ್ಯದರ್ಶಿ ಮತ್ತು ಶ್ರೀ ಎಂ.ಸಿ.ಪೂಣಚ್ಚ, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಇವರುಗಳ ಮೇಲಿನ ಇಲಾಖಾ ವಿಚಾರಣೆ-ಅಂತಿಮ ಆದೇಶ.

**ಓದಲಾಗಿದೆ:-**
1 ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 18 ಎಸ್ಇಎನ್ 06 ದಿನಾಂಕ:29.05.2006.
2 ಜ್ಞಾಪನಾ ಪತ್ರ ಸಂಖ್ಯೆ:ಸಿಆಸುಇ 18 ಎಸ್ಇಎನ್ 06 ದಿನಾಂಕ:29.05.2006.
3 ನೋಟೀಸ್ ಸಂಖ್ಯೆ:ಸಿಆಸುಇ 18 ಎಸ್ಇಎನ್ 06 ದಿನಾಂಕ:29.05.2006.
4 ಶ್ರೀಮತಿ ಪಿ.ಪುಷ್ಪರಾಣಿ ಇವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ:26.06.2006.
5 ಶ್ರೀ ಎಂ.ಸಿ.ಪೂಣಚ್ಚ ಇವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ:21.06.2006.

**ಪ್ರಸ್ತಾವನೆ:**

ಶ್ರೀಮತಿ ಪಿ.ಪುಷ್ಪರಾಣಿ, ನಿವೃತ್ತ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರು ದಿನಾಂಕ:09.08.99 ರಿಂದ 06.11.04ರವರೆಗೆ ಕರ್ನಾಟಕ ಸರ್ಕಾರದ ಸಚಿವಾಲಯದ ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಶ್ರೀ ಹೆಚ್.ಎಸ್. ಶ್ರೀಧರಮೂರ್ತಿ, ಹಿಂದಿನ ಉಪ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು ಇವರ ವಿರುದ್ಧ ಇಲಾಖಾ ವಿಚಾರಣೆಗೆ ಸಂಬಂಧಿಸಿದಂತೆ ಮಾನ್ಯ ಮುಖ್ಯಮಂತ್ರಿಯವರಿಂದ ದೋಷಾರೋಪಣೆ ಪಟ್ಟಿ ಹೊರಡಿಸಲು ಅನುಮೋದನೆ ನೀಡಿದ್ದ ಕಡತದ ಸಂ:ಐಎಫ್ಎಸ್ 201 ಡಿಎಸ್ಇ 92ರಲ್ಲಿ ಯಾವುದೇ ಕ್ರಮ ಜರುಗಿಸದೇ ದಿನಾಂಕ:06.11.04ರಂದು ಮುಂಬಡ್ತಿ ಹೊಂದಿ ಬಿಡುಗಡೆಯಾಗಿರುವುದರ ಮೂಲಕ ಕರ್ತವ್ಯಲೋಪ ಎಗಿದ್ದರ ಮೇರೆಗೆ ಹಾಗೂ ತದನಂತರ ಅಧೀನ ಕಾರ್ಯದರ್ಶಿಯಾಗಿ ಕಾರ್ಯಭಾರ ವಹಿಸಿಕೊಂಡ ಶ್ರೀ ಎಂ.ಸಿ.ಪೂಣಚ್ಚ ಇವರು ದಿನಾಂಕ:18.11.04 ರಿಂದ 18.04.05ರವರೆಗೆ ಕಾರ್ಯನಿರ್ವಹಿಸಿ ಸದರಿಯವರು ದಿನಾಂಕ:18.04.05ರಂದು ವರ್ಗಾವಣೆ ಹೊಂದಿ ಯೋಜನೆ ಇಲಾಖೆಯಿಂದ ಬಿಡುಗಡೆ ಹೊಂದುವವರೆಗೂ ಶ್ರೀ ಹೆಚ್.ಎಸ್.ಶ್ರೀಧರಮೂರ್ತಿ ಇವರಿಗೆ ಸಂಬಂಧಿಸಿದ ಪ್ರಕರಣದಲ್ಲಿ ಯಾವುದೇ ಕ್ರಮ ಜರುಗಿಸದೇ ಕರ್ತವ್ಯಲೋಪ ಮತ್ತು ದುರ್ನಡತೆ ಎಸಗಿರುವುದು ಮೇಲ್ನೋಟಕ್ಕೆ ನಿಜವೆಂದು ಕಂಡು ಬಂದಿದ್ದರಿಂದ ಇವರುಗಳ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಲು ಮೇಲೆ (1)ರಲ್ಲಿ ಓದಲಾದ ದಿನಾಂಕ:29.05.2006ರ ಸರ್ಕಾರಿ ಆದೇಶದಲ್ಲಿ ಶ್ರೀಮತಿ ಪುಷ್ಪರಾಣಿ, ನಿವೃತ್ತ ಉಪ ಕಾರ್ಯದರ್ಶಿ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 214ರಡಿಯಲ್ಲಿ ವಿಚಾರಣೆ ಪ್ರಾರಂಭಿಸಲು ಸರ್ಕಾರದ ಮಂಜೂರಾತಿ ನೀಡಿ, ಮೇಲೆ (2)ರಲ್ಲಿ ಓದಲಾದ ದಿನಾಂಕ:29.05.06ರಂದು ಆರೋಪಣಾ

ಪಟ್ಟಿಯನ್ನು ಜ್ಞಾಪನಾ ಪತ್ರದ ಮೂಲಕ ಜಾರಿಗೊಳಿಸಲಾಗಿತ್ತು. ಮೇಲೆ (3)ರಲ್ಲಿ ಓದಲಾದ ದಿನಾಂಕ:29.05.06ರಂದು ಶ್ರೀ ಎಂ.ಸಿ.ಪೂರ್ಣಚ್ಛ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 11, 11-ಎ ರಡಿ ಆರೋಪಣಾ ಪಟ್ಟಿಯನ್ನು ಸೂಚನಾ ಪತ್ರದ ಮೂಲಕ ಜಾರಿಗೊಳಿಸಿ ಪ್ರತಿ ರಕ್ಷಣಾ ಹೇಳಿಕೆ ಸಲ್ಲಿಸಲು ಇಬ್ಬರು ಅಧಿಕಾರಿಗಳಿಗೆ ಅವಕಾಶ ನೀಡಲಾಗಿತ್ತು.

ಆಪಾದಿತರಾದ ಶ್ರೀಮತಿ ಪಿ.ಪುಷ್ಪರಾಣಿ ಹಾಗೂ ಶ್ರೀ ಎಂ.ಸಿ.ಪೂಣಚ್ಛ ಇವರುಗಳು ಮೇಲೆ (4) ಮತ್ತು (5)ರಲ್ಲಿನ ದಿನಾಂಕಗಳಲ್ಲಿ ಪ್ರತಿ ರಕ್ಷಣಾ ಹೇಳಿಕೆ ಸಲ್ಲಿಸಿ, ಅವರುಗಳ ಮೇಲಿನ ಆರೋಪಗಳನ್ನು ಅಲ್ಲಗಳೆದಿದ್ದರು. ಇಬ್ಬರೂ ಆಪಾದಿತರು ಸಲ್ಲಿಸಿದ್ದ ಪ್ರತಿ ರಕ್ಷಣಾ ಹೇಳಿಕೆಯಲ್ಲಿನ ಅಂಶ ಹಾಗೂ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದಾಗ, ಶ್ರೀ ಹೆಚ್.ಎಸ್.ಶ್ರೀಧರಮೂರ್ತಿ ಇವರಿಗೆ ಶಿಸ್ತು ಕ್ರಮ ಪ್ರಾರಂಭಿಸಲು ಮಾನ್ಯ ಮುಖ್ಯಮಂತ್ರಿಗಳು ಅನುಮೋದಿಸಿದ ಕಡತವು ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದಿಂದ ಯೋಜನಾ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರಿಗೆ ಹಿಂದಿರುಗಿಸಿದ ನಂತರ, ಸದರಿ ಕಡತವು ಅಧೀನ ಕಾರ್ಯದರ್ಶಿಯಾಗಿದ್ದ ಶ್ರೀಮತಿ ಪಿ.ಪುಷ್ಪರಾಣಿ ಹಾಗೂ ಶ್ರೀ ಎಂ.ಸಿ.ಪೂಣಚ್ಛ ಇವರುಗಳಿಗೆ ಪ್ರಧಾನ ಕಾರ್ಯದರ್ಶಿಗಳ ಕಛೇರಿಯಿಂದ ಕಳುಹಿಸಿರುವುದಕ್ಕೆ ಯಾವುದೇ ದಾಖಲೆಗಳು ಇಲ್ಲದಿರುವುದರಿಂದ ಮತ್ತು ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಶ್ರೀ ಹೆಚ್.ಎಸ್.ಶ್ರೀಧರಮೂರ್ತಿ ಇವರ ಪ್ರಕರಣದಲ್ಲಿ ಈಗಾಗಲೇ ಅವರ ಮಾತೃ ಇಲಾಖೆಯಾದ ಯೋಜನೆ ಇಲಾಖೆಯು ಅವರ ವಿರುದ್ಧ ಇಲಾಖಾ ವಿಚಾರಣೆ ಪ್ರಕರಣ ಕೈಬಿಟ್ಟು ಆದೇಶ ಹೊರಡಿಸಿರುವುದರಿಂದ ಪ್ರಸ್ತುತ ಪ್ರಕರಣದಲ್ಲಿ ಆಪಾದಿತ ಅಧಿಕಾರಿಗಳು ನೀಡಿರುವ ವಿವರಣೆಗಳನ್ನು ಪರಿಗಣಿಸಿ ಅವರುಗಳು ಯಾವುದೇ ಕರ್ತವ್ಯಲೋಪ ಹಾಗೂ ದುರ್ನಡತೆ ಎಸಗಿಲ್ಲದಿರುವುದನ್ನು ಮನಗಂಡ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 18 ಎಸ್ಇಎನ್ 06, ಬೆಂಗಳೂರು, ದಿನಾಂಕ:28ನೇ ಜುಲೈ 2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು ಶ್ರೀಮತಿ ಪಿ.ಪುಷ್ಪರಾಣಿ, ನಿವೃತ್ತ ಸರ್ಕಾರದ ಉಪ ಕಾರ್ಯದರ್ಶಿ ಹಾಗೂ ಶ್ರೀ ಎಂ.ಸಿ.ಪೂಣಚ್ಛ, ಸರ್ಕಾರದ ಅಧೀನ ಕಾರ್ಯದರ್ಶಿ ಅವರುಗಳನ್ನು ದಿನಾಂಕ:29.05.2006ರ ನೋಟೀಸಿನಲ್ಲಿ ಮಾಡಲಾದ ದೋಷಾರೋಪಣೆಯಿಂದ ಮುಕ್ತರನ್ನಾಗಿಸುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರುಗಳು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1434

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಪ್ರದೀಪ್ ಎಸ್.ರಾಜನಾಳ್, ಸರ್ಕಾರದ ಜಂಟಿ ಕಾರ್ಯದರ್ಶಿ, ನಿಯೋಜನೆ ಮೇಲೆ ಪ್ರಾಂಶುಪಾಲರು, ಜಿಲ್ಲಾ ತರಬೇತಿ ಸಂಸ್ಥೆ, ಕೋಲಾರ ಇವರ ಮೇಲಿನ ಆರೋಪಗಳಿಗೆ ಶಿಸ್ತು ಕ್ರಮ–ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂಖ್ಯೆ:ಸಿಆಸುಇ 85 ಎಸ್ಇಎನ್ 06 ದಿನಾಂಕ:23.03.2006.
2. ಶ್ರೀ ಪ್ರದೀಪ್ ಎಸ್.ರಾಜನಾಳ್ ಇವರ ಹೇಳಿಕೆ ದಿನಾಂಕ:08.08.2006.
3. 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ:ಸಿಆಸುಇ 85 ಎಸ್ಇಎನ್ 06 ದಿನಾಂಕ: 04.04.2007.
4. ಶ್ರೀ ಪ್ರದೀಪ್ ಎಸ್.ರಾಜನಾಳ್ ಇವರ ಹೇಳಿಕೆ ದಿನಾಂಕ:18.05.2007.
5. ಸರ್ಕಾರದ ಪತ್ರ ಸಂಖ್ಯೆ:ಸಿಆಸುಇ 85 ಎಸ್ಇಎನ್ 06 ದಿನಾಂಕ:28.05.2007.

**ಪ್ರಸ್ತಾವನೆ:–**

ಶ್ರೀ ಪ್ರದೀಪ್ ಎಸ್.ರಾಜನಾಳ್, ಸರ್ಕಾರದ ಜಂಟಿ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ 426 ಸಅಸೇ 2005, ದಿನಾಂಕ:21.12.2005ರಲ್ಲಿ ಜಿಲ್ಲಾ ತರಬೇತಿ ಸಂಸ್ಥೆ, ಶಿವಮೊಗ್ಗ ಇಲ್ಲಿನ ಪ್ರಾಂಶುಪಾಲರ ಖಾಲಿ ಹುದ್ದೆಗೆ ನಿಯೋಜನೆ ಮೇಲೆ ವರ್ಗಾಯಿಸಿ ನೇಮಿಸಲಾಗಿತ್ತು. ಅಧಿಸೂಚನೆಯನ್ನು ಬೆಂಗಳೂರಿನಲ್ಲಿರುವ ಅಧಿಕೃತ ನಿವಾಸದ ಮನೆ ಸಂಖ್ಯೆ:ಬಿ–104, ಕೆ.ಪಿ.ಡಬ್ಲ್ಯೂ.ಡಿ. ಕ್ವಾಟರ್ಸ್, ಜೀವನ್ ಭೀಮಾನಗರ ಇಲ್ಲಿಗೆ ನೊಂದಾಯಿತ ಅಂಚೆಯ ಮೂಲಕ ಕಳುಹಿಸಲಾಗಿತ್ತು. ಆದರೆ, ಅಂಚೆ ಕಛೇರಿಯವರು ಅಧಿಸೂಚನೆಯಿರುವ ಲಕೋಟೆಯ ಮೇಲೆ "Addressee left" ಎಂದು ಷರಾ ನಮೂದಿಸಿ, ಹಿಂತಿರುಗಿಸಿದ್ದರಿಂದ ಪುನ: ಸದರಿ ಅಧಿಸೂಚನೆಯನ್ನು ದಿನಾಂಕ:17.01.2006 ಸಂಖ್ಯೆ:ಸಿಆಸುಇ 426 ಸಅಸೇ 2005ರ ಸರ್ಕಾರದ ಪತ್ರದೊಂದಿಗೆ ಲಗತ್ತಿಸಿ ಜಾರಿಗೊಳಿಸುತ್ತಾ, ನಿಯೋಜನೆ ಮೇಲೆ ವರ್ಗಾಯಿಸಿ, ನೇಮಿಸಿದ ಸ್ಥಳದಲ್ಲಿ ಕರ್ತವ್ಯಕ್ಕೆ ಕೂಡಲೇ ಹಾಜರಾಗದಿದ್ದಲ್ಲಿ, ಶಿಸ್ತು ಕ್ರಮ ಕೈಗೊಳ್ಳಲಾಗುವುದೆಂದು ಸೂಚಿಸಲಾಗಿತ್ತು. ಸದರಿ ಅಧಿಕಾರಿಯವರು ನೇಮಕ ಮಾಡಲಾದ ಅಧಿಸೂಚನೆಯನ್ನು ದಿನಾಂಕ:21.01.2006ರಂದು ಸ್ವೀಕರಿಸಿರುತ್ತಾರೆ. ಆದರೆ, ಸದರಿಯವರು, ನೇಮಕ ಮಾಡಿರುವ ಹುದ್ದೆಯಲ್ಲಿ ಕಾರ್ಯಭಾರ

ವಹಿಸಿಕೊಳ್ಳದೆ, ಬೆಂಗಳೂರು ನಗರ ಅಥವಾ ಕರ್ನಾಟಕ ಸಚಿವಾಲಯದಲ್ಲಿ ನೇಮಕ ಮಾಡುವಂತೆ ದಿನಾಂಕ:16.01.2006 ರಂದು ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿರುವುದಕ್ಕೆ ಉತ್ತರವಾಗಿ ದಿನಾಂಕ:21.12.2005ರ ಸರ್ಕಾರದ ಅಧಿಸೂಚನೆಯಲ್ಲಿ ವರ್ಗಾಯಿಸಿ, ನೇಮಿಸಲಾದ ಹುದ್ದೆಯಲ್ಲಿಯೇ ಕರ್ತವ್ಯಕ್ಕೆ ಹಾಜರಾಗಿ, ವರದಿ ನೀಡದಿದ್ದಲ್ಲಿ ಅವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲಾಗುವುದೆಂದು ಸೂಚನೆ ನೀಡುವ ಸಮಸಂಖ್ಯೆಯ ಅರೆ ಸರ್ಕಾರಿ ಪತ್ರ ದಿನಾಂಕ:28.01.2006ನ್ನು ನೊಂದಾಯಿತ ಅಂಚೆ ಮೂಲಕ ಕಳುಹಿಸಿರುವುದನ್ನು ಸದರಿ ಅಧಿಕಾರಿಯವರು ದಿನಾಂಕ:31.01.2006ರಂದು ಸ್ವೀಕರಿಸಿದ್ದರೂ ಸಹ, ಸರ್ಕಾರದ ನಿರ್ದೇಶನಗಳನ್ನು ಉಲ್ಲಂಘಿಸಿ ಕರ್ತವ್ಯಕ್ಕೆ ಹಾಜರಾಗದೆ ದುರ್ನಡತೆ ಎಸಗಿರುವ ಆರೋಪಕ್ಕಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ:23.03.2006ರಲ್ಲಿ ಕರ್ನಾಟಕ ನಾಗರೀಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 12ರಡಿಯಲ್ಲಿ ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸಿ, ನೋಟೀಸ್ ಜಾರಿ ಮಾಡಲಾಗಿತ್ತು.

ಶ್ರೀ ಪ್ರದೀಪ್ ಎಸ್.ರಾಜನಾಳ್ ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ:08.08.2006ರಂದು ಸಲ್ಲಿಸಿರುವ ಪ್ರತಿ ರಕ್ಷಣಾ ಹೇಳಿಕೆಯಲ್ಲಿ, ಶಿವಮೊಗ್ಗದಲ್ಲಿರುವ ತರಬೇತಿ ಸಂಸ್ಥೆಗೆ ಸಿಆಸು ಇಲಾಖೆ (ತರಬೇತಿ) ಈ ಇಲಾಖೆಯು ಶ್ರೀ ಹೆಚ್.ಎನ್.ನಟರಾಜ್ ಇವರಿಗೆ ಬಡ್ತಿ ನೀಡಿ ನೇಮಕ ಮಾಡಿದ್ದು, ಅದೇ ಸಂದರ್ಭದಲ್ಲಿ ಸಿಆಸು ಇಲಾಖೆ (ಸೇವೆಗಳು) ಯು ತಮ್ಮನ್ನು ವರ್ಗಾಯಿಸಿ ನೇಮಕ ಮಾಡಿರುವುದರಿಂದ ಯಾರು ಯಾವ ಆದೇಶವನ್ನು ಪಾಲಿಸಬೇಕೆಂಬ ಇಕ್ಕಟ್ಟು ಉದ್ಭವಿಸಿದ್ದರಿಂದ ತನ್ನನ್ನು ನೇಮಕ ಮಾಡಲಾದ ಹುದ್ದೆಯಲ್ಲಿ ಕಾರ್ಯಭಾರ ವಹಿಸಿಕೊಳ್ಳಲು ಸಾಧ್ಯವಾಗಲಿಲ್ಲವೆಂದು ತಿಳಿಸಿದ್ದಾರೆ. ಸದರಿಯವರ ರಕ್ಷಣಾ ಹೇಳಿಕೆಯಲ್ಲಿನ ಅಂಶಗಳನ್ನು ಸರ್ಕಾರವು ಪರಿಶೀಲಿಸಿ ಸದರಿ ಉತ್ತರದಲ್ಲಿ ಮನಗಾಣುವಂತಹ ಯಾವುದೇ ಅಂಶಗಳು ಇಲ್ಲದಿರುವುದರಿಂದ ಸದರಿ ಹೇಳಿಕೆಯನ್ನು ತಿರಸ್ಕರಿಸಿ ಮೇಲೆ (3)ರಲ್ಲಿ ಓದಲಾದ ದಿನಾಂಕ:04.04.2007ರಲ್ಲಿ 2ನೇ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಿ ಅವರ ಹೇಳಿಕೆ ಏನಾದರು ಇದ್ದಲ್ಲಿ ಸಲ್ಲಿಸಲು ಸ್ವಾಭಾವಿಕ ನ್ಯಾಯ ಕಲ್ಪಿಸಲಾಯಿತು.

ಆಪಾದಿತ ಅಧಿಕಾರಿಯು ಮೇಲೆ (4)ರಲ್ಲಿ ಓದಲಾದ ದಿನಾಂಕ:18.05.2007ರಂದು ಸಲ್ಲಿಸಿರುವ ಲಿಖಿತ ಹೇಳಿಕೆಯಲ್ಲಿ, ಶಿವಮೊಗ್ಗ ಜಿಲ್ಲಾ ತರಬೇತಿ ಸಂಸ್ಥೆಗೆ 2 ಅಧಿಕಾರಿಗಳನ್ನು ಒಮ್ಮೆಲೆ ನೇಮಕ ಮಾಡಿದ್ದರಿಂದ ಸದರಿ ಹುದ್ದೆಯಲ್ಲಿ ಹಾಜರಾಗಲು ಸಾಧ್ಯವಾಗಲಿಲ್ಲವೆಂದು ತಿಳಿಸುತ್ತಾ, ಪೂರ್ಣ ಪ್ರಮಾಣದಲ್ಲಿ ನೋಟೀಸಿಗೆ ಉತ್ತರ ಸಲ್ಲಿಸಲು 15 ದಿನಗಳ ಕಾಲಾವಕಾಶ ನೀಡುವಂತೆ ಕೋರಿದ್ದರು. ಸದರಿ ಅಧಿಕಾರಿಯವರ ಕೋರಿಕೆ ಮೇರೆಗೆ ಮೇಲೆ (5)ರಲ್ಲಿ ಓದಲಾದ ದಿನಾಂಕ:28.05.2007ರ ಸರ್ಕಾರದ ಪತ್ರದಲ್ಲಿ ಹೇಳಿಕೆ ಸಲ್ಲಿಸಲು 31.05.2007ರವರೆಗೆ ಕಾಲಾವಕಾಶ ನೀಡಲಾಗಿತ್ತು. ಆದರೆ, ಸದರಿಯವರು ಈವರೆಗೂ ಪೂರ್ಣ ಪ್ರಮಾಣದಲ್ಲಿ ರಕ್ಷಣಾ ಹೇಳಿಕೆ ಸಲ್ಲಿಸಿರುವುದಿಲ್ಲ.

ಆಪಾದಿತ ಅಧಿಕಾರಿಯವರು ದಿನಾಂಕ:08.08.2006ರಂದು ಮೊದಲನೇ ನೋಟೀಸಿಗೆ ನೀಡಿದ ಉತ್ತರ ಹಾಗೂ 2ನೇ ಕಾರಣ ಕೇಳುವ ನೋಟೀಸಿಗೆ ದಿನಾಂಕ:04.04.2007ರಂದು ಸಲ್ಲಿಸಿರುವ ಹೇಳಿಕೆಗಳನ್ನು ದಾಖಲಾತಿಗಳಿಂದ ಪರಿಶೀಲಿಸಿದಾಗ, ಸದರಿಯವರು ದಿನಾಂಕ:25.12.2005ರಿಂದ 07.08.2006ರವರೆಗೆ ಅನಧಿಕೃತ ಗೈರು ಹಾಜರಾಗಿದ್ದಲ್ಲದೇ, ಅವರಿಗೆ ಜಾರಿ ಮಾಡಲು ಕಳುಹಿಸಲಾದ ನೋಟೀಸನ್ನು ಸ್ವೀಕರಿಸದೇ, ಬೇಜವಾಬ್ದಾರಿಯಿಂದ ವರ್ತಿಸಿರುವುದು ಸಾಬೀತಾಗಿರುತ್ತದೆ ಹಗೂ ಒಬ್ಬ ಹಿರಿಯ ಸರ್ಕಾರಿ ಅಧಿಕಾರಿಯಾಗಿ, ದುರ್ನಡತೆ ಎಸಗಿರುವುದನ್ನು ತೀವ್ರವಾಗಿ ಪರಿಗಣಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 85 ಎಸ್ಇಎನ್ 2006, ಬೆಂಗಳೂರು, ದಿನಾಂಕ:26ನೇ ಜುಲೈ 2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು, ಶ್ರೀ ಪ್ರದೀಪ್ ಎಸ್.ರಾಜನಾಳ್, ಸರ್ಕಾರದ ಜಂಟಿ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ, ನಿಯೋಜನೆ ಮೇಲೆ ಪ್ರಾಂಶುಪಾಲರು, ಜಿಲ್ಲಾ ತರಬೇತಿ ಸಂಸ್ಥೆ, ಕೋಲಾರ ಅವರ ಮುಂದಿನ 2 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರದಂತೆ (without cumulative effect) ತಡೆ ಹಿಡಿಯುವ ದಂಡನೆ ವಿಧಿಸುತ್ತದೆ. ಹಾಗೂ ಸದರಿಯವರು ದಿನಾಂಕ:25.12.2005 ರಿಂದ 07.08.2006 ರವರೆಗಿನ ಅನಧಿಕೃತ ಗೈರು ಹಾಜರಾದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 106–ಎ ಅಡಿ ವೇತನರಹಿತ ರಜೆ ಎಂದು ಪರಿಗಣಿಸಿ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1435

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 182 ಎಸ್ಇಎನ್ 2007, ಬೆಂಗಳೂರು, ದಿನಾಂಕ:24ನೇ ಜುಲೈ 2007.**

**ವಿಷಯ:** ಶ್ರೀ ಬಿ.ಪ್ರಸನ್ನಯ್ಯ, ನಿವೃತ್ತ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ ಇವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಡಿಯಲ್ಲಿ ಮಂಜೂರಾತಿ ನೀಡುವ ಬಗ್ಗೆ–ಆದೇಶ.

ಶ್ರೀ ಬಿ.ಪ್ರಸನ್ನಯ್ಯ, ನಿವೃತ್ತ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ, ಬೆಂಗಳೂರು ಇವರು ಈ ಹಿಂದೆ ಜಂಟಿ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಸದರಿಯವರನ್ನು ಅಧಿಸೂಚನೆ ಸಂಖ್ಯೆ:ಪಿಡಿ 59 ಎಸ್ಎಸ್ಎಂ 04,

ದಿನಾಂಕ:25.10.2004ರಲ್ಲಿ ಕೊಡಗು ಜಿಲ್ಲಾ ಪಂಚಾಯತ್, ಮಡಿಕೇರಿ ಇಲ್ಲಿನ ಮುಖ್ಯ ಯೋಜನಾಧಿಕಾರಿಯಾಗಿ ನೇಮಕ ಮಾಡಲಾಗಿದ್ದು, ಸದರಿಯವರು ದಿನಾಂಕ:25.10.2004 ರಿಂದ 18.02.2005ರವರೆಗೆ ಅನಧಿಕೃತ ಗೈರು ಹಾಜರಾಗಿದ್ದು, ನಂತರ ದಿನಾಂಕ:19.02.2005 ಮತ್ತು 20.02.2005 ರಂದು ಕರ್ತವ್ಯ ನಿರ್ವಹಿಸಿ, ಪುನ: ದಿನಾಂಕ:21.02.2005 ರಿಂದ ಅನಧಿಕೃತ ಗೈರು ಹಾಜರಾಗಿದ್ದರು. ಸರ್ಕಾರವು ದಿನಾಂಕ:29.05.2005 ಸಂಖ್ಯೆ:ಪಿಡಿ 83 ಎಸ್‌ಎಸ್‌ಎಂ 2005(ಭಾ)ರ ಆದೇಶದಲ್ಲಿ ಯೋಜನಾ ಮತ್ತು ಸಾಂಖ್ಯಿಕ ಇಲಾಖೆಯಲ್ಲಿನ ಪ್ರದೇಶಾಭಿವೃದ್ಧಿ ವಿಭಾಗದಲ್ಲಿ ಖಾಲಿ ಇದ್ದ ನಿರ್ದೇಶಕರ ಹುದ್ದೆಗೆ ಶ್ರೀ ಬಿ.ಪ್ರಸನ್ನಯ್ಯ ಇವರನ್ನು ನೇಮಕ ಮಾಡಲಾಗಿದ್ದು, ಸಿಆಸು ಇಲಾಖೆಯು ದಿನಾಂಕ:12.06.2006ರಂದು ಮರು ನೇಮಕಾತಿ ಆದೇಶ ಹೊರಡಿಸಿರುತ್ತದೆ. ಈ ಆದೇಶದನ್ವಯ ಸದರಿಯವರು ದಿನಾಂಕ:12.06.2006ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಅಂದರೆ, ಶ್ರೀ ಬಿ.ಪ್ರಸನ್ನಯ್ಯ, ನಿವೃತ್ತ ನಿರ್ದೇಶಕರು ಅವರು ದಿನಾಂಕ:25.10.2004 ರಿಂದ 18.02.2005ರವರೆಗೂ ಹಾಗೂ 21.02.2005ರಿಂದ 11.06.2006ರವರೆಗೆ ಅನಧಿಕೃತ ಗೈರು ಹಾಜರಾಗಿದ್ದು, ಈ ಅವಧಿಗೆ ರಜೆ ಮಂಜೂರಾತಿ ಪಡೆಯದೇ ಒಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿ ಸರ್ಕಾರಿ ನೌಕರನಿಗೆ ಸಲ್ಲದ ರೀತಿಯಲ್ಲಿ ನಡೆದುಕೊಳ್ಳುವ ಮೂಲಕ ದುರ್ನಡತೆ ಎಸಗಿರುವುದು ಕಂಡು ಬಂದಿರುವುದರಿಂದಲೂ,

ಮೇಲ್ಕಂಡ ದುರ್ನಡತೆಗಾಗಿ, ಶ್ರೀ ಬಿ.ಪ್ರಸನ್ನಯ್ಯ, ನಿವೃತ್ತ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ, ಬೆಂಗಳೂರು ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸಬೇಕೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಆದ್ದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಪ್ರಸನ್ನಯ್ಯ, ನಿವೃತ್ತ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ, ಬೆಂಗಳೂರು ಅವರ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ಇಲಾಖಾ ವಿಚಾರಣೆ ನಡೆಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ವಿಚಾರಣೆಯಲ್ಲಿ ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸತಕ್ಕದ್ದು ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 11, 11ಎ ರಲ್ಲಿ ನಿಗಧಿಪಡಿಸಿರುವ ಕಾರ್ಯವಿಧಾನವನ್ನು ಅನುಸರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1436

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಸಿ.ಎಂ.ಈಶ್ವರ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ಅಮಾನತ್ತು ಅವಧಿಯನ್ನು ಕರ್ತವ್ಯದ ಮೇಲಿನ ಅವಧಿ ಎಂದು ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 15 ಎಸ್‌ಇಎನ್ 93 ದಿನಾಂಕ:15.07.1993.
2. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 15 ಎಸ್‌ಇಎನ್ 93 ದಿನಾಂಕ:12.08.1994.
3. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 15 ಎಸ್‌ಇಎನ್ 93 ದಿನಾಂಕ:23.06.2007.
4. ಶ್ರೀ ಸಿ.ಎಂ.ಈಶ್ವರ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ಮನವಿ ದಿನಾಂಕ:03.07.2007.

**ಪ್ರಸ್ತಾವನೆ:–**

ಶ್ರೀ ಸಿ.ಎಂ.ಈಶ್ವರ್, ನಿವೃತ್ತ ಕೆಎಎಸ್ ಅಧಿಕಾರಿ ಅವರು ಮೈಸೂರು ಜಿಲ್ಲೆ, ನಂಜನಗೂಡು ಉಪ ವಿಭಾಗಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಅವರ ವ್ಯಾಪ್ತಿಯಲ್ಲಿ ಬರುತ್ತಿದ್ದ ಯಳಂದೂರು ತಾಲ್ಲೂಕಿನ ಗುಂಬಳ್ಳಿ, ಗಳಿಗನೂರು, ಯರೀಯೂರು, ಕೆ.ದೇವರಹಳ್ಳಿ, ಯರಂಗಬಳ್ಳಿ ಗ್ರಾಮಗಳಲ್ಲಿ ಕರೀಕಲ್ಲಿನ ಅನಧಿಕೃತ ಗಣಿಗಾರಿಕೆ ಮತ್ತು ಸಾಗಾಣಿಕೆ ತಡೆಗಟ್ಟುವಲ್ಲಿ ವಿಫಲವಾಗಿ ಸರ್ಕಾರಕ್ಕೆ ಕೋಟ್ಯಂತರ ಆಸ್ತಿ ನಷ್ಟವುಂಟು ಮಾಡಿದ ಆರೋಪ ಹಾಗೂ ಅನಧಿಕೃತ ಗಣಿಗಾರಿಕೆಯಿಂದ ಯಳಂದೂರು ತಾಲ್ಲೂಕಿನ ಗುಂಬಳ್ಳಿ, ಗಣಿಗನೂರು ಗ್ರಾಮಗಳಲ್ಲಿ ಪುರಾತನ ಕಲ್ಲಿನ ಮಂಟಪ ಹಾಗೂ ದೇವಸ್ಥಾನಗಳಿಗೆ ಅಪಾಯವುಂಟು ಮಾಡಿದಾಗ ಪೂಜಾ ಸ್ಥಳಗಳ ರಕ್ಷಣೆಗಾಗಿ ಉಪ ವಿಭಾಗಾಧಿಕಾರಿ ಮಟ್ಟದ ಮುಜರಾಯಿ ಅಧಿಕಾರಿಯಾಗಿ ಕ್ರಮ ಕೈಗೊಳ್ಳದ ಆರೋಪದ ಸಂಬಂಧ ಮೇಲೆ (1)ರಲ್ಲಿ ಓದಲಾದ ದಿನಾಂಕ:15.07.93ರ ಸರ್ಕಾರಿ ಆದೇಶದಲ್ಲಿ ಅವರನ್ನು ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿಟ್ಟು, ಸೇವೆಯಿಂದ ಅಮಾನತ್ತುಗೊಳಿಸಿ ಆದೇಶ ಹೊರಡಿಸಲಾಯಿತು. ನಂತರ ಮೇಲೆ (2)ರಲ್ಲಿ ಓದಲಾದ ದಿನಾಂಕ:12.08.94ರ ಸರ್ಕಾರಿ ಆದೇಶದಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿಟ್ಟು ಅವರ ಅಮಾನತ್ತನ್ನು ರದ್ದುಪಡಿಸಿ ಮತ್ತೆ ಸೇವೆಗೆ ತೆಗೆದುಕೊಳ್ಳಲಾಯಿತು. ಸದರಿಯವರ ವಿರುದ್ಧ ಮಾಡಲಾದ ಆರೋಪಗಳ ಬಗ್ಗೆ ಶ್ರೀ ಎನ್.ಎಸ್.ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಅವರು ವಿಚಾರಣೆ ನಡೆಸಿ ಸರ್ಕಾರಕ್ಕೆ ಸಲ್ಲಿಸಲಾದ ವರದಿಯಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ನೀಡಲಾದ ಅಭಿಪ್ರಾಯವನ್ನು ಪರಿಶೀಲಿಸಿದ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ವಿಚಾರಣಾಧಿಕಾರಿಗಳ ಅಭಿಪ್ರಾಯವನ್ನು ಒಪ್ಪಿ ಮೇಲೆ (3)ರಲ್ಲಿ ಓದಲಾದ ದಿನಾಂಕ:23.06.07ರ ಸರ್ಕಾರಿ ಆದೇಶದಲ್ಲಿ ಆಪಾದಿತ ಅಧಿಕಾರಿಯವರನ್ನು ಆರೋಪಮುಕ್ತರನ್ನಾಗಿಸಿರುತ್ತದೆ ಮತ್ತು ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆಂದು ಆದೇಶಿಸಿರುತ್ತದೆ.

ಮೇಲೆ (4)ರಲ್ಲಿ ಓದಲಾದ ದಿನಾಂಕ:03.07.07ರ ಮನವಿಯಲ್ಲಿ, ಶ್ರೀ ಸಿ.ಎಂ.ಈಶ್ವರ್, ನಿವೃತ್ತ ಕೆಎಎಸ್ ಅಧಿಕಾರಿಯವರು ಸರ್ಕಾರವು ಅವರ ವಿರುದ್ಧ ಮಾಡಲಾದ ಆರೋಪಗಳಿಂದ ಮುಕ್ತಗೊಳಿಸಿರುವುದರಿಂದ, ಸದರಿಯವರು ಅಮಾನತ್ತಿನಲ್ಲಿದ್ದ

ದಿನಾಂಕ:15.07.1993 ರಿಂದ 11.08.1994ರವರೆಗಿನ ಅವಧಿಯನ್ನು ಕರ್ತವ್ಯದ ಅವಧಿ ಎಂದು ಸಕ್ರಮಗೊಳಿಸಬೇಕೆಂದು ಕೋರಿರುತ್ತಾರೆ. ಇವರ ಮನವಿಯನ್ನು ಪರಿಶೀಲಿಸಲಾಗಿದ್ದು, ಮೇಲ್ಕಂಡ ಪ್ರಕರಣದಲ್ಲಿ ಆಪಾದಿತರನ್ನು ಆರೋಪಮುಕ್ತರನ್ನಾಗಿ ಮಾಡಿರುವುದರಿಂದ, ಸರ್ಕಾರವು ಮೇಲ್ಕಂಡ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಅವಧಿ ಎಂದು ಪರಿಗಣಿಸಲು ನಿರ್ಣಯಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 15 ಎಸ್‌ಇಎನ್ 1993, ಬೆಂಗಳೂರು ದಿನಾಂಕ:31ನೇ ಜುಲೈ 2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು ಶ್ರೀ ಸಿ.ಎಂ.ಈಶ್ವರ್, ನಿವೃತ್ತ ಕೆಎಎಸ್ ಅಧಿಕಾರಿ, ಹಿಂದಿನ ಉಪ ವಿಭಾಗಾಧಿಕಾರಿ, ನಂಜನಗೂಡು, ಮೈಸೂರು ತಾಲ್ಲೂಕು ಇವರು ಅಮಾನತ್ತಿನಲ್ಲಿದ್ದ ದಿನಾಂಕ:15.07.1993 ರಿಂದ 11.08.1994ರ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 100(3)ರನ್ವಯ ಕರ್ತವ್ಯದ ಮೇಲಿನ ಅವಧಿ ಎಂದು ಪರಿಗಣಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1437 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ಎಸ್.ಕೃಷ್ಣಮೂರ್ತಿ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ– ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 37 ಎಸ್‌ಇಎನ್ 03 ದಿನಾಂಕ:10.05.2004.
2. ಶ್ರೀ ಬಿ.ಎ.ಕುಟಿನೋ, ಐ.ಎ.ಎಸ್, ಆಡಳಿತಾಧಿಕಾರಿ, ಕಾಡಾ ಹಾಗೂ ವಿಚಾರಣಾಧಿಕಾರಿಗಳು ಅವರ ವಿಚಾರಣಾ ವರದಿ ದಿನಾಂಕ:19.02.2007.
3. ನೋಟೀಸ್ ಸಂಖ್ಯೆ:ಸಿಆಸುಇ 37 ಎಸ್‌ಇಎನ್ 03 ದಿನಾಂಕ:07.04.2007.
4. ಶ್ರೀ ಎಸ್.ಕೃಷ್ಣಮೂರ್ತಿ, ಕೆಎಎಸ್ ಅಧಿಕಾರಿ ಅವರ ಉತ್ತರ ದಿನಾಂಕ:19.04.2007.

**ಪ್ರಸ್ತಾವನೆ:–**

ಶ್ರೀ ಎಸ್.ಕೃಷ್ಣಮೂರ್ತಿ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರು ಕೃಷ್ಣ ಮೇಲ್ದಂಡೆ ಯೋಜನೆ ಜಮಖಂಡಿಯಲ್ಲಿ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಜಮಖಂಡಿ ಹಾಗೂ ಅಥಣಿ ತಾಲ್ಲೂಕಿನ ವಿವಿಧ ಗ್ರಾಮಗಳ ಸ.ನಂ.ಗಳ ಪರಿಹಾರ ಧನ ಪಾವತಿಸುವಲ್ಲಿ ಅಕ್ರಮವೆಸಗಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿದ 13 ಆರೋಪಗಳಿಗಾಗಿ ಅವರ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ:10.05.2004ರ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಬಿ.ಎ.ಕುಟಿನೋ, ಐ.ಎ.ಎಸ್., ಆಡಳಿತಾಧಿಕಾರಿ, ಕಾಡಾ, ಬೆಳಗಾವಿ ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಯವರು ಮೇಲೆ (2)ರಲ್ಲಿ ಓದಲಾದ ದಿನಾಂಕ:19.02.2007ರ ವಿಚಾರಣಾ ವರದಿಯನ್ನು ಸಲ್ಲಿಸಿ, ಆರೋಪಿತರ ವಿರುದ್ಧ ಮಾಡಲಾದ 13 ಆರೋಪಗಳು ಸಾಬೀತಾಗಿರುವುದಿಲ್ಲವೆಂಬ ನಿರ್ಣಯ ನೀಡಿರುತ್ತಾರೆ.

2) ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಸಲ್ಲಿಸಿರುವ ವರದಿಯನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಆರೋಪಿತರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂಬ ವಿಚಾರಣಾ ವರದಿಯನ್ನು ಒಪ್ಪದೆ ಈ ಕೆಳಕಂಡ ವಿಷಯಗಳಿಗೆ ಸಂಬಂಧಪಟ್ಟಂತೆ ಅವರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿವೆಯೆಂದು ನಿರ್ಧರಿಸಿ ಅವರಿಗೆ ದಂಡನೆ ವಿಧಿಸಲು ತೀರ್ಮಾನಿಸಿ ಮೇಲೆ (3)ರಲ್ಲಿ ಓದಲಾದ ದಿನಾಂಕ:07.04.2007 ನೋಟೀಸ್‌ನೊಂದಿಗೆ ವಿಚಾರಣಾ ವರದಿಯನ್ನು ಒದಗಿಸಿ ವಿಚಾರಣಾ ವರದಿಯ ಕುರಿತು ಅಹವಾಲು ಏನಾದರೂ ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು.

i) ಸಂತ್ರಸ್ಥರಿಗೆ ಚೆಕ್ಕುಗಳನ್ನು ಸಕಾಲದಲ್ಲಿ ತಲುಪಿಸದೇ ಅನಾವಶ್ಯ ವಿಳಂಬ ಮಾಡಿ ಸರ್ಕಾರಕ್ಕೆ ಬಡ್ಡಿ ರೂಪದಲ್ಲಿ ಹೆಚ್ಚಿನ ಆರ್ಥಿಕ ಹೊರೆ ಉಂಟು ಮಾಡಿರುತ್ತಾರೆ.

ii) ಎರಡು ಬಾರಿ ಪತ್ರಿಕಾ ಪ್ರಕಟಣೆ ಹೊರಡಿಸಿ ಅನಾವಶ್ಯಕವಾಗಿ ರೂ.21,861/-ಗಳನ್ನು ವೆಚ್ಚ ಮಾಡಲಾಗಿ ಈ ಹಣವನ್ನು ವಸೂಲಿ ಮಾಡಲಾಗಿದ್ದರೂ ಸಹ ದುರ್ನಡತೆಯು ಸಾಬೀತಾಗಿದೆಯೆಂದು ಭಾವಿಸಬಹುದಾಗಿದೆ.

iii) ಅಥಣಿ ತಾಲ್ಲೂಕಿನಲ್ಲಿ ಪುನರ್ ವಸತಿ ಕೇಂದ್ರಕ್ಕೆ ಸ್ವಾಧೀನಪಡಿಸಿಲಾಗಿದ್ದ ಎರಡು ಪ್ರಕರಣಗಳ ಸಂಬಂಧ ಚೆಕ್ಕುಗಳನ್ನು ಮೂರುವರೆ ವರ್ಷ ಮುಂದಿನ ಕ್ರಮ ತೆಗೆದುಕೊಳ್ಳದೇ ಉಳಿಸಿಕೊಂಡು ಎರಡನೇ ಬಾರಿ ಬಿಲ್ ಸಲ್ಲಿಸಿರುವ ಆರೋಪವನ್ನು ಸಾಬೀತಾಗಿದೆಯೆಂದು ನಿರ್ಣಯಿಸಬಹುದಾಗಿದೆ.

iv) ಹೆಚ್ಚುವರಿ ಕ್ಷೇತ್ರದ ಪರಿಹಾರ ಧನದ ಪೂರಕ ಐತೀರ್ಪಿನಲ್ಲಿ ಮೃತರಾದ ಶ್ರೀ ಹನುಮಂತ ವೆಂಕಪ್ಪ ಕನದಾಳಿ ಇವರ ಹೆಸರನ್ನು ನಮೂದಿಸಿರುವ ಕ್ರಮವು ಸಿಬ್ಬಂದಿಯ ತಪ್ಪಿನಿಂದ ಆಗಿದ್ದರೂ ಸಹ ಇದನ್ನು ಭಾಗಶ: ರುಜುವಾತಾಗಾದೆಯೆಂದು ಭಾವಿಸಬಹುದಾಗಿದೆ.

v) ಜಮೀನಿನ ಮಾಲೀಕತ್ವದ ಬಗ್ಗೆ ನ್ಯಾಯಾಲಯದಲ್ಲಿ ವ್ಯಾಜ್ಯ ನಡೆದಿದ್ದರೂ ಪರಿಹಾರ ಮೊತ್ತವನ್ನು ಸಂದಾಯ ಮಾಡಿದ್ದಾರೆ. ಇದೂ ಸಹ ಸಾಬೀತಾಗಿದೆಯೆಂದು ಪರಿಗಣಿಸಬೇಕಾಗುತ್ತದೆ.

vi) ಪ್ರಗತಿ ಪರಿಶೀಲನಾ ಸಭೆಯಲ್ಲಿ ಸಕಾಲದಲ್ಲಿ ಐತೀರ್ಪು ಸಲ್ಲಿಸಿರುವುದಿಲ್ಲ.

3) ಆರೋಪಿತರು ನೋಟೀಸಿಗೆ ಮೇಲೆ (4)ರಲ್ಲಿ ಓದಲಾದ ದಿನಾಂಕ:19.04.2007ರಂದು ಉತ್ತರ ಸಲ್ಲಿಸಿ, ತಮ್ಮ ವಿರುದ್ಧ ಮಾಡಲಾದ 13 ಆರೋಪಗಳನ್ನು ವಿಚಾರಣಾಧಿಕಾರಿಯವರು ನಿಯಮಾನುಸಾರ ತನಿಖೆ ಮಾಡಿ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವರದಿ ನೀಡಿರುತ್ತಾರೆಂದು ತಿಳಿಸಿ ವಿಚಾರಣಾಧಿಕಾರಿಯವರು ಎಲ್ಲ ವಾಸ್ತವಾಂಶಗಳನ್ನು ಪರಿಶೀಲಿಸಿ ತಮ್ಮ ಅಭಿಪ್ರಾಯವನ್ನು ತಿಳಿಸಿರುವುದರಿಂದ, ಇದು ನಿಯಮಾನುಸಾರವಾಗಿರುವುದರಿಂದ, ಈ ವಿಚಾರಣಾ ವರದಿಯನ್ನು ಒಪ್ಪಿ ತಮ್ಮನ್ನು ಆರೋಪಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

4) ಆರೋಪಿತರ ಉತ್ತರವನ್ನು ಮತ್ತೊಮ್ಮೆ ದಾಖಲೆಗಳೊಂದಿಗೆ ಪರಿಶೀಲಿಸಿಲಾಯಿತು. ಆರೋಪಿತರಾದ ಶ್ರೀ ಎಸ್.ಕೃಷ್ಣಮೂರ್ತಿ, ಕೆಎಎಸ್ ಅಧಿಕಾರಿ ಅವರು ತಮ್ಮ ಲಿಖಿತ ಉತ್ತರವನ್ನು ನೀಡಿ ಯಾವುದೇ ಪೂರಕವಾದ ದಾಖಲೆಗಳನ್ನು ಸಲ್ಲಿಸಿರುವುದಿಲ್ಲ. ಇದರಿಂದಾಗಿ ಅವರು ಕೇವಲ ಔಪಚಾರಿಕವಾಗಿ ನಿರ್ಣಯವನ್ನು ವಿರೋಧಿಸುತ್ತಿರುವುದು ಕಂಡು ಬರುತ್ತದೆ. ಆದ್ದರಿಂದ ವಿಚಾರಣಾ ವರದಿ, ಆಪಾದಿತರ ಅಹವಾಲು ಮತ್ತು ಲಭ್ಯವಿರುವ ಸಾಕ್ಷ್ಯಾಧ್ಯಾರಗಳನ್ನು ಪರಿಶೀಲಿಸಲಾಗಿ, ಕಂಡಿಕೆ–2 ರಲ್ಲಿರುವ ಪ್ರಕರಣಗಳಿಗೆ ಸಂಬಂಧಿಸಿದಂತೆ ವಿಚಾರಣಾ ವರದಿಯನ್ನು ಒಪ್ಪಲು ಸಕಾರಣಗಳು ಕಂಡು ಬರುತ್ತಿಲ್ಲ. ಈ ಹಿನ್ನೆಲೆಯಲ್ಲಿ ವಿಚಾರಣಾ ವರದಿಯನ್ನು ಮೇಲ್ಕಂಡ ಅಂಶಗಳಿಗೆ ಸೀಮಿತಗೊಂಡಂತೆ ಒಪ್ಪದೇ ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 37 ಎಸ್ಇಎನ್ 2003, ಬೆಂಗಳೂರು, ದಿನಾಂಕ:4ನೇ ಆಗಸ್ಟ್ 2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು, ಶ್ರೀ ಎಸ್.ಕೃಷ್ಣಮೂರ್ತಿ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಇವರ ವಿರುದ್ಧ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ನೀಡಿರುವ ವರದಿಯನ್ನು ಒಪ್ಪದೇ ಆಪಾದಿತರ ಮುಂದಿನ 2 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ (with cumulative effect) ತಡೆ ಹಿಡಿಯಲು ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಾಸುದೇವಮೂರ್ತಿ**

ಪಿ.ಆರ್. 1480 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

**ವಿಷಯ:** ಶ್ರೀ ನಾರಾಯಣಸ್ವಾಮಿ, ನಿವೃತ್ತ ಕೆಎಎಸ್ ಅಧಿಕಾರಿ ಮತ್ತು ಶ್ರೀ ಎಸ್.ವೈ.ಬಸವರಾಜಪ್ಪ, ಯೋಜನಾ ನಿರ್ದೇಶಕರು, ಡಿ.ಆರ್.ಡಿ.ಎ. ಕೋಶ, ಜಿಲ್ಲಾ ಪಂಚಾಯತ್, ಚಿತ್ರದುರ್ಗ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ಬೇರೊಬ್ಬ ವಿಚಾರಣಾಧಿಕಾರಿಯವರನ್ನು ನೇಮಿಸುವ ಬಗ್ಗೆ-ಪರಿಷ್ಕೃತ ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 24 ಎಸ್ಇಎನ್ 07 ದಿನಾಂಕ:11.06.2007.
2. ಶ್ರೀ ಪಿ.ಗೋಪಾಲಕೃಷ್ಣ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಅವರ ಪತ್ರ ದಿನಾಂಕ:23.06.2007.

**ಪ್ರಸ್ತಾವನೆ:**

ಶ್ರೀ ನಾರಾಯಣಸ್ವಾಮಿ, ನಿವೃತ್ತ ಕೆಎಎಸ್ ಅಧಿಕಾರಿ ಮತ್ತು ಶ್ರೀ ಎಸ್.ವೈ.ಬಸವರಾಜಪ್ಪ, ಯೋಜನಾ ನಿರ್ದೇಶಕರು, ಡಿ.ಆರ್.ಡಿ.ಎ. ಕೋಶ, ಜಿಲ್ಲಾ ಪಂಚಾಯತ್, ಚಿತ್ರದುರ್ಗ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಮೇಲೆ (1)ರಲ್ಲಿ ಓದಲಾದ ದಿನಾಂಕ:11.06.07ರ ಸರ್ಕಾರಿ ಆದೇಶದಲ್ಲಿ ಶ್ರೀ ಪಿ.ಗೋಪಾಲಕೃಷ್ಣ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಉಪ ಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ಚಿತ್ರದುರ್ಗ ಅವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಲಾಗಿರುತ್ತದೆ. ವಿಚಾರಣಾಧಿಕಾರಿಯಾದ ಶ್ರೀ ಪಿ.ಗೋಪಾಲಕೃಷ್ಣ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ:23.06.07ರಂದು ಪತ್ರ ಬರೆದು ತಮ್ಮ ಅನಾರೋಗ್ಯದ ನಿಮಿತ್ತ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಸಾಧ್ಯವಾಗುತ್ತಿಲ್ಲವೆಂದು ತಿಳಿಸಿ, ಬೇರೊಬ್ಬ ವಿಚಾರಣಾಧಿಕಾರಿಯನ್ನು ನೇಮಿಸಿಕೊಳ್ಳುವಂತೆ ಕೋರಿರುತ್ತಾರೆ. ವಿಚಾರಣಾಧಿಕಾರಿಯವರ ಪತ್ರವನ್ನು ಪರಿಶೀಲಿಸಿ ಪರಿಗಣಿಸಿದ ಸರ್ಕಾರವು ಶ್ರೀ ಪಿ.ಗೋಪಾಲಕೃಷ್ಣ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಅವರ ಬದಲಿಗೆ ಬೇರೊಬ್ಬ ವಿಚಾರಣಾಧಿಕಾರಿಯನ್ನು ನೇಮಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 24 ಎಸ್ಇಎನ್ 2007, ಬೆಂಗಳೂರು, ದಿನಾಂಕ:4ನೇ ಆಗಸ್ಟ್ 2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13ನ್ನು ಓದಿಕೊಂಡಂತೆ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ನಾರಾಯಣಸ್ವಾಮಿ, ನಿವೃತ್ತ ಕೆಎಎಸ್ ಅಧಿಕಾರಿ ಮತ್ತು ಶ್ರೀ ಎಸ್.ವೈ.ಬಸವರಾಜಪ್ಪ, ಯೋಜನಾ ನಿರ್ದೇಶಕರು, ಡಿ.ಆರ್.ಡಿ.ಎ. ಕೋಶ, ಜಿಲ್ಲಾ ಪಂಚಾಯತ್, ಚಿತ್ರದುರ್ಗ ಅವರುಗಳ ಮೇಲೆ ಹೊರಿಸಲಾದ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ಸಮಸಂಖ್ಯೆಯ ದಿನಾಂಕ:11.06.2007ರ ಸರ್ಕಾರಿ ಆದೇಶದಲ್ಲಿ

ನೇಮಿಸಲಾಗಿದ್ದ ಶ್ರೀ ಪಿ.ಗೋಪಾಲಕೃಷ್ಣ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಅವರ ಬದಲಿಗೆ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಉಪ ಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ಚಿತ್ರದುರ್ಗ ಅವರೇ ಮಂಡನಾಧಿಕಾರಿಯಾಗಿ ಮುಂದುವರಿಯುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1484

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

## ಶಿಕ್ಷಣ ಸಚಿವಾಲಯ

**ವಿಷಯ:–** ಕರ್ನಾಟಕ ವಿಶ್ವವಿದ್ಯಾಲಯದ ಸಿ ಮತ್ತು ಡಿ ಸಮೂಹದ ವೇತನ ಶ್ರೇಣಿ ಪರಿಷ್ಕರಣೆ ನ್ಯಾಯಾಲಯದ ನಿರ್ದೇಶನದಂತೆ ಅಹವಾಲು ಸ್ವೀಕರಿಸಿ ಪರಿಶೀಲಿಸದ ನಂತರ ಕ್ರಮ ತೆಗೆದುಕೊಳ್ಳುವ ಬಗ್ಗೆ.

**ಓದಲಾಗಿದೆ:–**
1) ದಿನಾಂಕ:9–6–1999 ಮತ್ತು 29–11–1999, ಸಂಖ್ಯೆ:ಕವಿವಿ/ಸಿಆಸುವಿ/ಎಸ್.ಟಿ.1/99/2000/1480 ಮತ್ತು 5326ರ ಕರ್ನಾಟಕ ವಿಶ್ವವಿದ್ಯಾಲಯದ ಪತ್ರ.
2) ಸರ್ಕಾರದ ಆದೇಶ ಸಂಖ್ಯೆ:ಇಡಿ 61 ಯುಕೆವಿ 99, ಬೆಂಗಳೂರು, ದಿನಾಂಕ:30–3–2000.
3) ರಿಟ್ ಅರ್ಜಿ ಸಂಖ್ಯೆ:16618 ರಿಂದ 16691/2000(ಎಸ್) ಕರ್ನಾಟಕ ಉಚ್ಚನ್ಯಾಯಾಲಯದ ತೀರ್ಪು ದಿನಾಂಕ:11.12.2002.
4) ರಿಟ್ ಅರ್ಜಿ ಸಂಖ್ಯೆ:16514 ರಿಂದ 16599/2000(ಎಸ್) ಕರ್ನಾಟಕ ಉಚ್ಚನ್ಯಾಯಾಲಯದ ತೀರ್ಪು ದಿನಾಂಕ:11.12.2002.
5) ರಿಟ್ ಅರ್ಜಿ ಸಂಖ್ಯೆ:15521 ರಿಂದ 15522/2000(ಎಸ್) ಕರ್ನಾಟಕ ಉಚ್ಚನ್ಯಾಯಾಲಯದ ತೀರ್ಪು ದಿನಾಂಕ:11.12.2002.
6) ರಿಟ್ ಅರ್ಜಿ ಸಂಖ್ಯೆ:15619 ರಿಂದ 15665/2000(ಎಸ್) ಕರ್ನಾಟಕ ಉಚ್ಚನ್ಯಾಯಾಲಯದ ತೀರ್ಪು ದಿನಾಂಕ:11.12.2002.

**ಪ್ರಸ್ತಾವನೆ:–**

1. ರಾಜ್ಯ ವಿಶ್ವವಿದ್ಯಾಲಯಗಳ ಏಕರೂಪ ಕಾಯ್ದೆ 1976 ರಲ್ಲಿ ಜಾರಿಗೆ ಬರುವುದಕ್ಕಿಂತ ಮೊದಲು ಕರ್ನಾಟಕ ವಿಶ್ವವಿದ್ಯಾಲಯವು ಸ್ವಾಯತ್ತತೆ ಹೊಂದಿದ್ದ ಆಡಳಿತ ಸಂಸ್ಥೆಯಾಗಿದ್ದು ವಿಶ್ವವಿದ್ಯಾಲಯದ ನೌಕರರ ವೇತನ ಶ್ರೇಣಿ ನಿಗದಿಪಡಿಸುವ ಬಗ್ಗೆ ಯಾವುದೇ ನಿಯಮಾವಳಿಗಳನ್ನು ರೂಪಿಸಿಕೊಂಡಿರುವುದಿಲ್ಲ. ವಿಶ್ವವಿದ್ಯಾಲಯದ ಆಡಳಿತ ಮಂಡಳಿಯು ಕೇವಲ ಸಿಂಡಿಕೇಟ್ ನಿರ್ಣಯದ ಮೇರೆಗೆ ನೇಮಕಾತಿ ಪೂರ್ವದಲ್ಲೇ 10ನೇ ತರಗತಿ ಉತ್ತೀರ್ಣರಾದ ಗ್ರೂಪ್–ಡಿ ನೌಕರರಿಗೆ ಅವರು ನೇಮಕವಾದ ದಿನಾಂಕದಿಂದ ಹಾಗೂ ನೇಮಕಗೊಂಡ ನಂತರ 10ನೇ ತರಗತಿಯಲ್ಲಿ ಉತ್ತೀರ್ಣರಾದ ದಿನಾಂಕದಿಂದ ಕಿರಿಯ ಸಹಾಯಕ ಹುದ್ದೆಗೆ ಲಭ್ಯವಿದ್ದ ವೇತನ ಶ್ರೇಣಿಯನ್ನು ಮಂಜೂರು ಮಾಡಲಾಗಿರುತ್ತದೆ. ಈ ಕುರಿತು ಕರ್ನಾಟಕ ವಿಶ್ವವಿದ್ಯಾಲಯದ ದಿ:26–12–1998ರ ಸಿಂಡಿಕೇಟ್ ಸಭೆಯಲ್ಲಿ ನಿರ್ಣಯ ಸಂಖ್ಯೆ:26 ಮತ್ತು 27ರ ನಿರ್ಣಯಗಳು ಕಾನೂನುಬಾಹಿರವಾದ ಕಾರಣ ಕೆ.ಎಸ್.ಯು. ಅಧಿನಿಯಮ 1976ರ ಪ್ರಕರಣ (8) ರಡಿಯಲ್ಲಿ ಸರ್ಕಾರಕ್ಕೆ ನೀಡಲಾದ ಅಧಿಕಾರವನ್ನು ಚಲಾಯಿಸಿ ಸದರಿ ಕಾನೂನುಬಾಹಿರ ನಿರ್ಣಯವನ್ನು ಮತ್ತು ಅದರಿಂದ ಉದಯಿಸಿದ ವಿದ್ಯುಕ್ತವಾದ ಆದೇಶಗಳನ್ನು ರದ್ದುಪಡಿಸಲಾಗಿತ್ತು ಹಾಗೂ ನೌಕರರಿಗೆ ನೀಡಲಾದ ಹೆಚ್ಚುವರಿ ಮೊತ್ತವನ್ನು ಅವರ ವೇತನದಿಂದ ವಸೂಲು ಮಾಡುವಂತೆ ಉಲ್ಲೇಖ (2) ರಲ್ಲಿರುವ ಸರ್ಕಾರಿ ಆದೇಶದಲ್ಲಿ ಆದೇಶಿಸಲಾಗಿತ್ತು.

2. ಸರ್ಕಾರದ ಈ ಆದೇಶದಿಂದ ಬಾಧಿತರಾದ ನೌಕರರುಗಳು ಕರ್ನಾಟಕ ಉಚ್ಚನ್ಯಾಯಾಲಯದಲ್ಲಿ ರಿಟ್ ಅರ್ಜಿಗಳನ್ನು ದಾಖಲಿಸಿದ್ದು ಉಲ್ಲೇಖ (3) ರಿಂದ (6) ರವರೆಗಿನ ರಿಟ್ ಅರ್ಜಿಗಳಲ್ಲಿ ಕರ್ನಾಟಕ ಉಚ್ಚನ್ಯಾಯಾಲಯವು ದಿ:11–12–2000 ದಂದು ನೀಡಿರುವ ತೀರ್ಪಿನಲ್ಲಿ ಎಲ್ಲಾ ರಿಟ್ ಅರ್ಜಿಗಳನ್ನು ವಿಲೇವಾರಿ ಮಾಡುತ್ತಾ ಈ ಎಲ್ಲಾ ಅರ್ಜಿದಾರರು ತಮ್ಮ ಅಹವಾಲುಗಳನ್ನು ಸರ್ಕಾರಕ್ಕೆ ಮಂಡಿಸಲು ಒಂದು ಅವಕಾಶ ನೀಡಿ ಈ ಕುರಿತು ಸೂಕ್ತ ವಿಚಾರಣೆ ನಡೆಸಿ ಈ ವಿಷಯವನ್ನು ಹೊಸದಾಗಿ ಪರಿಗಣಿಸಬೇಕೆಂದು ರಿಟ್ ಅರ್ಜಿಯಲ್ಲಿ ಮೊದಲ ಪ್ರತಿವಾದಿಯಾದ ರಾಜ್ಯ ಸರ್ಕಾರಕ್ಕೆ ನಿರ್ದೇಶನ ನೀಡಿರುತ್ತದೆ.

3. ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶಾನುಸಾರ ಅರ್ಜಿ ದಾಖಲಿಸಿದ ಎಲ್ಲಾ ಸಿಬ್ಬಂದಿಯು ದಿನಾಂಕ:18–3–2006 ರಂದು ಕರ್ನಾಟಕ ವಿಶ್ವವಿದ್ಯಾಲಯದ ಸಿಂಡಿಕೇಟ್ ಸಭಾಂಗಣದಲ್ಲಿ ಹಾಜರಿರುವಂತೆ ನೋಟೀಸನ್ನು ವಿಶ್ವವಿದ್ಯಾಲಯದ ಮೂಲಕ ನೀಡಲಾಗಿತ್ತು. ಉಚ್ಚ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿದ ನೌಕರರಲ್ಲಿ 30 ಸಿಬ್ಬಂದಿಯು ಗೈರು ಹಾಜರಾಗಿದ್ದು 04 ಮಂದಿ ಮರಣ ಹೊಂದಿರುತ್ತಾರೆ. ಉಳಿದ ಅರ್ಜಿದಾರರಿಂದ ಅಹವಾಲುಗಳನ್ನು ಸ್ವೀಕರಿಸಲಾಯಿತು. ಮತ್ತು ಅವುಗಳನ್ನು ಕೂಲಂಕುಷವಾಗಿ ಈ ಕೆಳಕಂಡಂತೆ ಪರಿಶೀಲಿಸಲಾಗಿರುತ್ತದೆ.

**(ಎ) ಗ್ರೂಪ್–ಡಿ ನೌಕರರು ಮತ್ತು ಪ್ರಯೋಗಾಲಯ ಅಟೆಂಡರ್‌ಗಳು:–**

1970ರಲ್ಲಿ ವೇತನ ಶ್ರೇಣಿಗಳು ಪರಿಷ್ಕರಣೆಯಾಗುವ ಪೂರ್ವದಲ್ಲಿ ಗ್ರೂಪ್–ಡಿ ವೃಂದಕ್ಕೆ ಸೇರಿದ Peons, Sweepers, Attenders ಗಳಿಗೆ ರೂ.55–75ರ ಸಮಾನ ವೇತನ ಶ್ರೇಣಿಯನ್ನು ಮಂಜೂರು ಮಾಡಲಾಗಿತ್ತು. 1970ರ ಪರಿಷ್ಕೃತ ವೇತನ ಶ್ರೇಣಿಗಳು ಜಾರಿಗೆ ಬಂದ ನಂತರ, ಪ್ರಯೋಗಾಲಯಗಳಲ್ಲಿ ಕೆಲವು ಹೆಚ್ಚಿನ ವಿದ್ಯಾರ್ಹತೆಯನ್ನು ಹೊಂದಿಲ್ಲದಿದ್ದರೂ ಹೆಚ್ಚಿನ ವೇತನ ಶ್ರೇಣಿಯಾದ ರೂ.80–140 ಗಳನ್ನು ನೀಡಿ, ಇತರ ಗುಂಪು–ಡಿ ವೃಂದಕ್ಕೆ ಸೇರಿದ Peons, Watchman ಹುದ್ದೆಗಳಿಗೆ ರೂ.65–95 ಗಳ ವೇತನ ಶ್ರೇಣಿಯನ್ನು ನೀಡಲಾಯಿತು.

ವಿಶ್ವವಿದ್ಯಾಲಯವು ರಚಿಸಿದ್ದ ಪ್ರೊ॥ ಎಸ್.ಜಿ. ಇಮ್ರಾಪುರ ಸಮಿತಿಯ ಶಿಫಾರಸ್ಸಿನನುಗುಣವಾಗಿ ಹಾಗೂ ಸಿಂಡಿಕೇಟ್ ನಿರ್ಣಯದ ಆಧಾರದ ಮೇಲೆ, ಆದರೆ, ಸರ್ಕಾರದ ಅನುಮೋದನೆಗೆ ಒಳಪಟ್ಟು ಪ್ರಯೋಗಾಲಯಗಳಲ್ಲಿ ದಿನಾಂಕ:1–1–1970 ರಿಂದ 31–8–1991ರ ಅವಧಿಯಲ್ಲಿ ಕಾರ್ಯ ನಿರ್ವಹಿಸಿದ್ದ ಗುಂಪು–ಡಿ ನೌಕರರಿಗೆ ಪ್ರಯೋಗಾಲಯ ಅಟೆಂಡರ್‌ಗಳ ವೇತನ ಶ್ರೇಣಿಯನ್ನು ಅಂದರೆ ರೂ.80–145 ಗಳ ವೇತನ ಶ್ರೇಣಿ ಮಂಜೂರು ಮಾಡಲಾಗಿದೆ. ಹಾಗೂ ಹೆಚ್ಚಿನ ವಿದ್ಯಾರ್ಹತೆ ಹೊಂದಿಲ್ಲದಿದ್ದರೂ ಅರ್ಜಿದಾರರಿಗಿಂತ ಕಿರಿಯರಾಗಿರುವ ನೌಕರರಿಗೆ ಹೆಚ್ಚುವರಿ ಪರಿಷ್ಕೃತ ವೇತನ ಶ್ರೇಣಿಯನ್ನು ನೀಡಲಾಗಿದೆ.

**(ಬಿ) ಗ್ರೂಪ್–ಡಿ ನೌಕರರು ಮತ್ತು ಪ್ರಯೋಗಾಲಯ ಅಟೆಂಡರ್‌ಗಳು:–**

ವಿಶ್ವವಿದ್ಯಾಲಯಗಳು ಏಕರೂಪ ಕಾಯ್ದೆ 1976 ಜಾರಿಗೆ ಬರುವುದಕ್ಕಿಂತ ಪೂರ್ವದಲ್ಲಿ 1972ನೇ ಸಾಲಿನಲ್ಲಿ ಎಸ್.ಎಸ್.ಎಲ್.ಸಿ. ಪಾಸಾಗಿರುವ ಕೆಲವು ಗ್ರೂಪ್–ಡಿ ನೌಕರರಿಗೆ ಅವರು ನೇಮಕಾತಿ ಹೊಂದಿದ ದಿನಾಂಕದಿಂದ ಮತ್ತು ಕೆಲವರಿಗೆ ನೇಮಕಾತಿ ಹೊಂದಿದ ನಂತರ ಎಸ್.ಎಸ್.ಎಲ್.ಸಿ. ಪಾಸಾದ ನೌಕರರಿಗೆ ಅವರು ಉತ್ತೀರ್ಣರಾದ ದಿನಾಂಕದಿಂದ ನಿಯಮಬಾಹಿರವಾಗಿ ಕಿರಿಯ ಸಹಾಯಕರ ವೇತನ ಶ್ರೇಣಿ ರೂ.90–200 ಗಳನ್ನು ನೀಡಲಾಗಿದೆ. ಆದರೆ, ಈ ಸೌಲಭ್ಯವನ್ನು ಪಡೆಯದ ಎಸ್.ಎಸ್.ಎಲ್.ಸಿ. ವಿದ್ಯಾರ್ಹತೆಯನ್ನು ಹೊಂದಿದ ಹಾಗೂ ಕಿರಿಯ ಸಹಾಯಕ ಹುದ್ದೆಗೆ ಮುಂಬಡ್ತಿ ಪಡೆದ ಕೆಲವು ಗ್ರೂಪ್–ಡಿ ನೌಕರರು ತಮಗೂ ಸಹ ಎಸ್.ಎಸ್.ಎಲ್.ಸಿ. ಪಾಸಾದ ದಿನಾಂಕದಿಂದ ಕಿರಿಯ ಸಹಾಯಕ ಹುದ್ದೆಯ ವೇತನ ಶ್ರೇಣಿಯನ್ನು ನೀಡಬೇಕೆಂದು ಕೋರಿದ್ದು, ಸಿಂಡಿಕೇಟ್ ನಿರ್ಣಯ ಸಂಖ್ಯೆ:8 ಮತ್ತು 12 ರನ್ವಯ ಸದರಿ ಸೌಲಭ್ಯವನ್ನು ಅವರಿಗೂ ಸಹ ನೀಡಲಾಗಿದೆ.

**(ಸಿ) ಪ್ರಯೋಗಾಲಯದ ಸಹಾಯಕರು ಮತ್ತು ಕಿರಿಯ ಸಹಾಯಕರು:–**

ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ದಿ:1–4–1970ರ ಪೂರ್ವದಲ್ಲಿ ಕಿರಿಯ ಗುಮಾಸ್ತರು/ಕಿರಿಯ ಸಹಾಯಕರು ಮತ್ತು ಪ್ರಯೋಗಾಲಯದ ಸಹಾಯಕರಿಗೆ ಸಮಾನ ವೇತನ ಶ್ರೇಣಿಗಳನ್ನು ಅಂದರೆ 1962ರ ಪೂರ್ವದಲ್ಲಿ ರೂ.55–130ಮ 1962ರಲ್ಲಿ ರೂ.80–150 ಮತ್ತು ದಿ:1–1–1970 ರಲ್ಲಿ ರೂ.90–200 ಗಳ ವೇತನ ಶ್ರೇಣಿಗಳನ್ನು ನೀಡಲಾಗಿದ್ದು, ಆದರೆ, ತುಕೋಳ್ ವೇತನ ಆಯೋಗದ ಶಿಫಾರಸ್ಸಿನಂತೆ ವಿಶ್ವವಿದ್ಯಾಲಯವು ಈ ಹುದ್ದೆಗಳಿಗೆ ಕೆಳಗಿನಂತೆ ವೇತನ ಶ್ರೇಣಿಗಳನ್ನು ಅಳವಡಿಸಿಕೊಂಡಿರುತ್ತದೆ.

| | ಪ್ರಯೋಗಾಲಯದ ಸಹಾಯಕರು | ಕಿರಿಯ ಸಹಾಯಕರು |
|---|---|---|
| 1–4–1970 | 130–290 | 90–200 |
| 1–1–1970 | 400–900 | 300–700 |
| 1–1–1982 | 630–1200 | 490–950 |
| 1–1–1987 | 1190–2200 | 960–1760 |
| 1–7–1993 | 1280–2450 | 1040–1900 |

ತುಕೋಳ್ ವೇತನ ಆಯೋಗವು ಬಿ.ಎಸ್ಸಿ. ವಿದ್ಯಾರ್ಹತೆಯನ್ನು ಹೊಂದಿದ್ದ ಪ್ರಯೋಗಾಲಯ ಸಹಾಯಕರಿಗೆ ರೂ.130–290 ಗಳ ವೇತನ ಶ್ರೇಣಿಯನ್ನು ನಿಗದಿಪಡಿಸಿದ್ದರೂ, ಕರ್ನಾಟಕ ವಿಶ್ವವಿದ್ಯಾಲಯದ ಸಿಂಡಿಕೇಟ್ ದಿನಾಂಕ: 12.8.1972 ರಂದು ಅಂಗೀಕರಿಸಲಾದ ನಿರ್ಣಯದಲ್ಲಿ ಪದವಿ ಹೊಂದಿದ ಹಾಗೂ ಹೊಂದದೇ ಇದ್ದ ಎಲ್ಲಾ ಪ್ರಯೋಗಾಲಯ ಸಹಾಯಕರಿಗೆ, 1981 ರಲ್ಲಿ ಪದವಿ ವಿದ್ಯಾರ್ಹತೆಯನ್ನು ಹೊಂದದೆ ಸಕ್ರಮಗೊಂಡ ಎಲ್ಲಾ ಪ್ರಯೋಗಾಲಯ ಸಹಾಯಕರಿಗೂ ಸಹ ಇದೇ ವೇತನ ಶ್ರೇಣಿಯನ್ನು ನೀಡಿರುವುದು ಗಮನಿಸಲಾಗಿದೆ ಮತ್ತು ಪ್ರಸ್ತುತ ಕರ್ನಾಟಕ ವಿಶ್ವವಿದ್ಯಾಲಯದ ಕಿರಿಯ ಸಹಾಯಕರು ಸರ್ಕಾರದ ಕಿರಿಯ ಸಹಾಯಕರಿಗೆ ನಿಗದಿಗೊಳಿಸಿರುವ ವೇತನ ಶ್ರೇಣಿಯನ್ನು ಪಡೆಯುತ್ತಿದ್ದರೂ ಅವರಿಗೆ ಕಾಲ್ಪನಿಕವಾಗಿ ಹೆಚ್ಚಿನ ಹಂತದಲ್ಲಿ ನಿಗದಿಗೊಳಿಸಲಾಗಿದ್ದು, ಆದರೆ, 1976ರ ಪೂರ್ವದಲ್ಲಿ ಕಿರಿಯ ಸಹಾಯಕರಾಗಿ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ನೇಮಕಾತಿ ಹೊಂದಿ ಪ್ರಯೋಗಾಲಯ ಸಹಾಯಕರಿಗೆ ನಿಗದಿಪಡಿಸಲಾಗಿದ್ದ 1970ರ ರೂ.130–290 ಗಳ ಹೆಚ್ಚಿನ ವೇತನ ಶ್ರೇಣಿಯನ್ನು ಕಿರಿಯ ಸಹಾಯಕ ವೃಂದದ ನೌಕರರಿಗೆ ಮಾತ್ರ ವಿಸ್ತರಿಸಿ ದಿ:1–1–1977 ರಿಂದ ಅನ್ವಯವಾಗುವಂತೆ ಮಂಜೂರು ಮಾಡಿರುವ ರೂ.300–700ರ ವೇತನ ಶ್ರೇಣಿಯಲ್ಲಿಯೇ ಮುಂದುವರೆಸಲಾಗಿರುತ್ತದೆ.

1976ಕ್ಕೂ ಹಿಂದೆ ಸ್ಥಾಪಿತಗೊಂಡಂತ ವಿಶ್ವವಿದ್ಯಾಲಯಗಳನ್ನು ಒಂದೇ ರೂಪದ ಕಾಯ್ದೆಯಡಿಯಲ್ಲಿ ಸರ್ಕಾರವು ಕರ್ನಾಟಕ ವಿಶ್ವವಿದ್ಯಾಲಯ ಅಧಿನಿಯಮ 1976ನ್ನು ಜಾರಿಗೆ ತಂದಿತು. ವಿಶ್ವವಿದ್ಯಾಲಯಗಳು ಸ್ವಾಯತ್ತತೆ ಹೊಂದಿದ್ದ ಅವಧಿಯಲ್ಲಿ ಬೇರೆ ಬೇರೆ ವಿಶ್ವವಿದ್ಯಾಲಯಗಳಲ್ಲಿ ಒಂದೇ ಹುದ್ದೆಗೆ ಬೇರೆ ಬೇರೆ ವೇತನ ಶ್ರೇಣಿಗಳಿದ್ದವು. ಇದನ್ನು ಏಕರೂಪಗೊಳಿಸಲು ಎಲ್ಲಾ ವಿಶ್ವವಿದ್ಯಾಲಯಗಳು ಒಂದು ಹುದ್ದೆಗೆ ಒಂದೇ ವೇತನ ಶ್ರೇಣಿಯನ್ನು ಸಮಾನಾಂತರದ ರೂಪದಲ್ಲಿ ನಿಗದಿಪಡಿಸಲು ಶ್ರೀ ಎಸ್.ಬಿ. ಮುದ್ದಪ್ಪ ಇವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ಸರ್ಕಾರವು ದಿ:22–2–1977 ರಲ್ಲಿ ಸರ್ಕಾರಿ ಆದೇಶ ಸಂಖ್ಯೆ:ಇಡಿ 7 ಯುಎನ್‌ಐ 77 ರಲ್ಲಿ ರಚಿಸಿದ್ದು, ಈ ಸಮಿತಿಯು ಎಲ್ಲಾ ವಿಶ್ವವಿದ್ಯಾಲಯಗಳು ವಿವಿಧ

ಹುದ್ದೆಗಳಿಗೆ ವಿವಿಧ ವೇತನ ಶ್ರೇಣಿಗಳಿರುವುದನ್ನು ಗಮನಿಸಿ ಎಲ್ಲಾ ವಿಶ್ವವಿದ್ಯಾಲಯಗಳು ಒಂದು ಹುದ್ದೆಗೆ ಒಂದೇ ವೇತನ ಶ್ರೇಣಿಯನ್ನು ನಿಗದಿಪಡಿಸಲು ಶಿಫಾರಸ್ಸು ಮಾಡಿದ್ದು ದಿ:1–1–1977 ರಿಂದ ಅನ್ವಯವಾಗುವಂತೆ ವೇತನ ಶ್ರೇಣಿಗಳನ್ನು ಸದರಿ ಸಮಿತಿಯ ಶಿಫಾರಸ್ಸುಗಳನ್ನು ಜಾರಿಗೊಳಿಸಲಾಗಿರುತ್ತದೆ.

4. ಮೇಲೆ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 8 ಯುಕೆವಿ 2004 (ಭಾಗ–1), ಬೆಂಗಳೂರು ದಿನಾಂಕ:25ನೇ ಜುಲೈ 2007**

1) ಕರ್ನಾಟಕ ಉಚ್ಚ ನ್ಯಾಯಾಲಯವು ದಿ:11–12–2002 ರಂದು ಸಂಖ್ಯೆ:16618–91/2000, 16514–99/2000, 14703/2000, 15521–22/2000, 15619–6656/2000 ರಿಟ್ ಅರ್ಜಿಗಳಲ್ಲಿ ನೀಡಿದ ಆದೇಶಾನುಸಾರ ದಿನಾಂಕ: 18.3.2006 ರಂದು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಲ್ಲಿಸಿದ ಅರ್ಜಿದಾರರ ಅಹವಾಲುಗಳನ್ನು ಸ್ವೀಕರಿಸಲಾಯಿತು. ಮತ್ತು ಅದನ್ನು ಕಾನೂನು ಚೌಕಟ್ಟಿನಲ್ಲಿ ಕೂಲಂಕುಷವಾಗಿ ಪರಿಶೀಲಿಸಲಾಯಿತು.

2) ದಿ:1–1–1977 ರಿಂದ ಎಲ್ಲಾ ವಿಶ್ವವಿದ್ಯಾಲಯಗಳಲ್ಲಿ ಶ್ರೀ ಎಸ್.ಬಿ. ಮುದ್ದಪ್ಪ ಸಮಿತಿಯ ಶಿಫಾರಸ್ಸಿನಂತೆ ನಿಗದಿಪಡಿಸಿದ್ದ ವೇತನ ಶ್ರೇಣಿಯಲ್ಲಿ ಬೋಧಕೇತರ ಸಿಬ್ಬಂದಿಯು ಪಡೆಯುತ್ತಿರುವ ವೇತನ ಶ್ರೇಣಿಗಿಂತ ಹೆಚ್ಚಿನ ವೇತನ ಶ್ರೇಣಿಯನ್ನು ನೀಡಲು ಸರ್ಕಾರವು ಒಪ್ಪುವುದಿಲ್ಲ. ದಿನಾಂಕ:1–1–1977 ರಿಂದ ಜಾರಿಗೊಳಿಸಲಾದ ಶ್ರೀ ಎಸ್.ಬಿ. ಮುದ್ದಪ್ಪ ಸಮಿತಿಯ ಶಿಫಾರಸ್ಸಿನಂತೆ ನಿಗದಿಪಡಿಸಿರುವ ವೇತನ ಶ್ರೇಣಿಯಲ್ಲಿಯೇ ಮುಂದುವರೆಸಲು ಆದೇಶಿಸಲಾಗಿದೆ.

3) ಕರ್ನಾಟಕ ವಿಶ್ವವಿದ್ಯಾಲಯವು ನಿಯಮಬಾಹಿರವಾಗಿ ಕೆಲವು ಹುದ್ದೆಗಳಿಗೆ ನಿಯಮಾನುಸಾರ ಲಭ್ಯವಿದ್ದ ವೇತನ ಶ್ರೇಣಿಗಿಂತಲೂ ಹೆಚ್ಚಿನ ವೇತನ ಶ್ರೇಣಿಯನ್ನು ಕೇವಲ ವಿಶ್ವವಿದ್ಯಾಲಯದ ಸಿಂಡಿಕೇಟ್ ನಿರ್ಣಯದ ಆಧಾರದ ಮೇಲೆ ನೀಡಿರುವುದನ್ನು ಸಮರ್ಥಿಸಲು ಸಾಧ್ಯವಾಗುವುದಿಲ್ಲ. ಸರ್ಕಾರವು ದಿನಾಂಕ:30–3–2000 ದಂದು ಹೊರಡಿಸಿರುವ ಆದೇಶವು ನ್ಯಾಯಸಮ್ಮತವಾಗಿದ್ದು ಈ ಆದೇಶಾನುಸಾರ ತುರ್ತು ಕ್ರಮ ಜರುಗಿಸುವಂತೆಯೂ ಮತ್ತು ತೆಗೆದುಕೊಂಡ ಕ್ರಮದ ಬಗ್ಗೆ ವರದಿ ಸಲ್ಲಿಸುವಂತೆ ಆದೇಶಿಸಲಾಗಿದೆ.

4)ಈ ಆದೇಶವನ್ನು ಆರ್ಥಿಕ ಇಲಾಖೆಯು ಸಂಖ್ಯೆ: ಆಇ 476 ವೆಚ್ಚ–8/2006, ದಿ:20–1–2007ರ ಟಿಪ್ಪಣಿಯಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಬಿ. ಉಳವಿ**
ಪಿ.ಆರ್. 1449 ಸರ್ಕಾರದ ಅಧೀನ ಕಾರ್ಯದರ್ಶಿ,
ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ).

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ.ಎಂ.ಎಸ್.ರಾವುತರ್, ಪಿ.ಎಸ್.ಐ., ಅಫಜಲ್‌ಪುರ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ರಾಯಚೂರು ಇವರ ಆದೇಶ ಸಂಖ್ಯೆ : ಸಿಬ್ಬಂದಿ(3)ಪಿ.ಆರ್/93/2004, ದಿನಾಂಕ : 20–12–2004.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಐ.ಜಿ.ಪಿ., ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: 386/ಈ.ವ/2005, ದಿನಾಂಕ : 28–9–2005.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: ––
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು(2)/50/2006, ದಿನಾಂಕ : 24–6–2006.

**ಪ್ರಸ್ತಾವನೆ:**

ಶ್ರೀ.ಎಂ.ಎಸ್.ರಾವುತರ್, ಪಿ.ಎಸ್.ಐ., ಅಫಜಲ್‌ಪುರ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ ಇವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7 ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

ಆಪಾದಿತ ಪೊಲೀಸ್ ಅಧಿಕಾರಿ ರವರುಗಳು ಶಿಸ್ತಿನ ಇಲಾಖೆಯ ನೌಕರರಾಗಿರುವ ಶ್ರೀ.ಎಂ.ಎಸ್.ರಾವುತರ್, ಪಿ.ಎಸ್.ಐ., ಅಫಜಲ್‌ಪುರ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ ಆದ ನೀವು ಸಿರವಾರ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಠಾಣೆಗೆ ವಿಚಾರಣೆಗಾಗಿ ಸಲ್ಲಿಸಿದ ಅರ್ಜಿಗಳನ್ನು ಕೂಡಲೇ ವಿಚಾರಣೆ ಮಾಡಿ ಕಳಿಸಿಕೊಡುವುದು ನಿಮ್ಮ ಆದ್ಯ ಕರ್ತವ್ಯವಾಗಿದೆ. ಆದರೆ ಸಿದ್ಧಿ ದೋಷಿ ಸಂಖ್ಯೆ : 15409, ಬಸಪ್ಪಾ ತಂದೆ ಹನುಮಯ್ಯ, ಸಾ//ಹರವಿ, ತಾ//ಮಾನ್ವಿ ಇವರ ಪೇರೋಲ್ ಅರ್ಜಿಯ ವಿಚಾರಣೆ ಮಾಡಿ, ಕೂಡಲೇ ವರದಿ ಸಲ್ಲಿಸುವ ಬದಲು 2 ತಿಂಗಳ ವಿಳಂಬ ಮಾಡಿ, ದಿನಾಂಕ : 20–5–2004 ರಂದು ವರದಿ ಕಳಿಸಿ, ಕರ್ತವ್ಯದಲ್ಲಿ ಅತೀವ ಅಲಕ್ಷತನಗೈಯ್ದಿರುವ ಬಗ್ಗೆ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಿ ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ರಾಯಚೂರು ಇವರು ಮೇಲೆ ಕ್ರಮ ಸಂಖ್ಯೆ : 1) ರಲ್ಲಿ ಓದಲಾದ ದಿನಾಂಕ : 20–12–2004 ರ ಆದೇಶದಲ್ಲಿ

ಅರ್ಜಿದಾರರ 2 ವಾರ್ಷಿಕ ವೇತನ ಮುಂಬಡ್ತಿಗಳನ್ನು ಮುಂಬರುವ ವಾರ್ಷಿಕ ವೇತನ ಮುಂಬಡ್ತಿಗಳಿಗೆ ಧಕ್ಕೆಯಾಗದಂತೆ ಮುಂದೂಡಲಾಗಿದೆ ಎಂಬುದಾಗಿ ಶಿಕ್ಷೆ ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ ಇವರು ಅಪೀಲುದಾರರು ತಮ್ಮ ಮೇಲ್ಮನವಿಯಲ್ಲಿ ಪರಿಗಣಿಸಬಹುದಾದ ಅಂಶಗಳು ಹೊಂದಿರುವುದಿಲ್ಲ. ಆದಾಗ್ಯೂ ಅವರ ಸೇವಾ ಹಿರಿಮೆ ಹಾಗೂ ಇನ್ನು ಮುಂದೆ ಹೀಗಾಗದಂತೆ ನೋಡಿಕೊಳ್ಳಲು ಒಂದು ಅವಕಾಶವನ್ನು ಕಲ್ಪಿಸಿ, ಅವರ ವಿರುದ್ಧ ಎಸ್.ಪಿ., ರಾಯಚೂರು ಇವರು ತೆಗೆದುಕೊಂಡ ಶಿಸ್ತಿನ ಕ್ರಮವನ್ನು ಮಾರ್ಪಡಿಸಿ, ಇವರ ವಾರ್ಷಿಕ ವೇತನ ಬಡ್ತಿಯ ಒಂದು ಹಂತವನ್ನು ಮುಂದಿನ ವೇತನ ಬಡ್ತಿಗಳ ಮೇಲೆ ಧಕ್ಕೆಯಾಗದಂತೆ ಮುಂದೂಡಲಾಗಿದೆ ಎಂದು ಆದೇಶವನ್ನು ಹೊರಡಿಸಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣಾ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಎಸಗಿರುವ ನಿರ್ಲಕ್ಷತನದಿಂದ ಶಿಸ್ತು ಪ್ರಾಧಿಕಾರವು ವಿಧಿಸಿದ್ದ ತೀವ್ರತರವಾದ ದಂಡನೆಯನ್ನು ಮೇಲ್ಮನವಿ ಪ್ರಾಧಿಕಾರವು ಮಾನವೀಯತೆಯ ದೃಷ್ಟಿಯಿಂದ ಕಡಿಮೆಗೊಳಿಸಿದ್ದರಿಂದ ಈ ಸನ್ನಿವೇಶದಲ್ಲಿ ಸರ್ಕಾರ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒ.ಇ/139/ಪೊಸಿಅ/2007, ಬೆಂಗಳೂರು, ದಿ: 11ನೇ ಜುಲೈ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಎಂ.ಎಸ್.ರಾವುತರ್, ಪಿ.ಎಸ್.ಐ., ಅಫಜಲ್‌ಪುರ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 1389

**ವಿಷಯ:** ಶ್ರೀ.ಲಿಂಗಪ್ಪ, ಪಿ.ಎಸ್.ಐ., ಶಿರಾ ಪೊಲೀಸ್ ಠಾಣೆ, ತುಮಕೂರು ಜಿಲ್ಲೆರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಇವರ ಆದೇಶ ಸಂಖ್ಯೆ : ಪನ್ನಿ/12/2005, ಓ.ಬಿ. ಸಂಖ್ಯೆ : 57/2005–06, ದಿನಾಂಕ : 27–5–2005.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಐ.ಜಿ.ಪಿ., ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ : ಅಪೀಲು/16/2005–06, ದಿನಾಂಕ : 14–2–2006.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 11–7–2006.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು(2)/80/2006–07, ದಿನಾಂಕ : 9–11–2006.

**ಪ್ರಸ್ತಾವನೆ:**

ಶ್ರೀ.ಲಿಂಗಪ್ಪ, ಪಿ.ಎಸ್.ಐ., ಶಿರಾ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ ಇವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7 ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

ಶಿರಾ ಜೆ.ಎಂ.ಎಫ್.ಸಿ. ನ್ಯಾಯಾಲಯದ ಸಿ.ಸಿ. ಸಂಖ್ಯೆ : 877/03, ಕಲಂ 143, 147, 148, 324, 355, 448, 427, 504, 506 ಜೊತೆಗೆ 149 ಭಾ.ದಂ.ಸಂ. ಪ್ರಕರಣದಲ್ಲಿ ತನಿಖಾಧಿಕಾರಿಯಾಗಿ ತನಿಖೆಯ ಸಮಯದಲ್ಲಿ ಪಂಚನಾಮೆ ಮಾಡುವಾಗ ಕಲಂ 427 ಭಾ.ದಂ.ಸಂ.ಗೆ ಸಂಬಂಧಿಸಿದಂತೆ, ಟ್ಯೂಬ್‌ಲೈಟ್ ಮತ್ತು ಫ್ಯಾನ್ ಚೂರುಗಳನ್ನು ಅಮಾನತ್ತುಪಡಿಸಿರುವುದಿಲ್ಲವೆಂದು ಶಿರಾ ಸಹಾಯಕ ಸರ್ಕಾರಿ ಅಭಿಯೋಜಕರು ಆಕ್ಷೇಪಣೆ ಮಾಡಿರುತ್ತಾರೆ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಿ ಆರೋಪ ಸಾಭೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಇವರು ಮೇಲೆ ಕ್ರಮ ಸಂಖ್ಯೆ : 1) ರಲ್ಲಿ ಓದಲಾದ ದಿನಾಂಕ : 27–5–2005 ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡಿದೆ ಎಂದು ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ 2) ರಲ್ಲಿ ಓದಲಾದ ದಿನಾಂಕ: 14.2.2006 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣಾ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಯನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ನ್ಯಾಯಾಲಯಕ್ಕೆ ಸಾಕ್ಷಿ ನುಡಿಯಲು ಹೋಗುವಾಗ ಸರ್ಕಾರಿ ವಕೀಲರೊಡನೆ ಚರ್ಚಿಸಿ ಪೂರ್ವ ಸಿದ್ಧತೆಯನ್ನು ಮಾಡಿಕೊಳ್ಳದೆ ಕರ್ತವ್ಯದಲ್ಲಿ ನಿರ್ಲಕ್ಷತೆಯನ್ನು ಪ್ರದರ್ಶಿಸಿದ್ದು ಹಾಗೂ ಸದರಿಯವರ ಪರಿಷ್ಕರಣಾ ಮೇಲ್ಮನವಿಯನ್ನು ಪರಿಶೀಲಿಸಲು ಪೂರಕವಾದ ದಾಖಲೆಗಳು / ಸಮಜಾಯಿಷಿ ಒದಗಿಸಿರುವುದಿಲ್ಲ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒ.ಇ/137/ಪೊಸಿಅ/2007, ಬೆಂಗಳೂರು, ದಿ: 11ನೇ ಜುಲೈ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಲಿಂಗಪ್ಪ, ಪಿ.ಎಸ್.ಐ., ಶಿರಾ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1390 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಕೆ.ವೆಂಕಟೇಶಪ್ಪ, ನಿವೃತ್ತ ಪಿಸಿ–65, ಡಿ.ಎ.ಆರ್., ಕೋಲಾರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಕೋಲಾರ ಇವರ ಆದೇಶ ಸಂಖ್ಯೆ : ಡಿ.ಇ/22/1987, ಓ.ಬ.87/88–89 ದಿನಾಂಕ : 1–9–1980.
2. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 16–1–2006.
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು/2/72/2006–07, ದಿನಾಂಕ : 27–1–2007.

**ಪ್ರಸ್ತಾವನೆ:**

ಶ್ರೀ.ಕೆ.ವೆಂಕಟೇಶಪ್ಪ, ನಿವೃತ್ತ ಪಿಸಿ–65, ಡಿ.ಎ.ಆರ್., ಕೋಲಾರ ಇವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

ಶ್ರೀ.ವೆಂಕಟೇಶಪ್ಪ, ನಿವೃತ್ತ ಎಪಿಸಿ–65, ಡಿ.ಎ.ಆರ್., ಕೋಲಾರರವರು ಸರ್ಕಾರಿ ಸೇವೆಗೆ ದಿನಾಂಕ : 13–11–1964 ರಲ್ಲಿ ಸೇರಿದ್ದು, ಶ್ರೀಮತಿ.ಸಂಜೀವಮ್ಮ ಎಂಬುವವರನ್ನು ಮದುವೆಯಾಗಿದ್ದು, ಅವರಿಗೆ ಮಕ್ಕಳೂ ಸಹ ಇರುತ್ತಾರೆ. ಮೊದಲನೇ ಹೆಂಡತಿಯಾದ ಶ್ರೀಮತಿ.ಸಂಜೀವಮ್ಮ ರವರಿಗೆ ಮೋಸ ಮಾಡಿ ಸದರಿ ಪೇದೆಯವರು ಶ್ರೀಮತಿ.ಶಾಂತಮ್ಮ ಬಿನ್.ತಿಮ್ಮಪ್ಪ, ಸಂಗೊಂಡಹಳ್ಳಿ, ಕೋಲಾರ ತಾಲ್ಲೂಕು ರವರನ್ನು 2ನೇ ಮದುವೆಯಾಗಿರುತ್ತಾರೆ. ಈ ಸಂಬಂಧವಾಗಿ ಕೆ.ಸಿ.ಎಸ್. ಕಾಂಡಕ್ಟ್ ನಿಯಮ 28(1)ರ ಪ್ರಕಾರವಾಗಿ ಮೊದಲನೇ ಹೆಂಡತಿ ಜೀವಂತವಿರುವಾಗಲೇ 2ನೇ ಮದುವೆಯಾಗುವುದು ಕಾನೂನು ಬಾಹಿರವಾಗಿದ್ದು, ಈ ಬಗ್ಗೆ ಕೆ.ಎಸ್.ಪಿ. (ಡಿ.ಪಿ.) ರೂಲ್ಸ್ ನಿಯಮ 6 ರಂತೆ ಇಲಾಖಾ ವಿಚಾರಣೆಯನ್ನು ಕೈಗೊಂಡು ಇಲಾಖಾ ವಿಚಾರಣೆಯಲ್ಲಿ ಸದರಿ ಶ್ರೀ.ವೆಂಕಟೇಶಪ್ಪ, ಎಪಿಸಿ–65 ರವರ ವಿರುದ್ಧ ಮಾಡಿರುವ ಆರೋಪಗಳು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಈ ಕಛೇರಿಯ ಆದೇಶ ಸಂಖ್ಯೆ : ಡಿ.ಇ/22/87, ಓ.ಬಿ. ಸಂಖ್ಯೆ : 87/88–89, ದಿನಾಂಕ : 1–9–1980 ರಲ್ಲಿ ಸರ್ಕಾರಿ ಸೇವೆಯಿಂದ ಕಡ್ಡಾಯವಾಗಿ ನಿವೃತ್ತಿಗೊಳಿಸಿ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಆದೇಶಿಸಲಾಗಿರುತ್ತದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಕೋಲಾರ ಇವರು ಮೇಲೆ ಕ್ರಮ ಸಂಖ್ಯೆ : 1) ರಲ್ಲಿ ಓದಲಾದ ದಿನಾಂಕ : 1–9–1980 ರ ಆದೇಶದಲ್ಲಿ ಅರ್ಜಿದಾರರನ್ನು ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ ಅಮಾನತ್ತಿನಲ್ಲಿದ್ದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣಾ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಮೊದಲನೇಯ ಹೆಂಡತಿ ಜೀವಂತವಿರುವಾಗಲೇ ಸದರಿಯವರಿಗೆ ಮೋಸ ಮಾಡಿ 2ನೇ ಮದುವೆಯಾಗಿರುವುದು ಇಲಾಖಾ ವಿಚಾರಣೆಯಿಂದ ಸಾಬೀತಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಸಾಕ್ಷಿಯಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ:ಒ.ಇ/125/ಪೊಸಿಅ/2007, ಬೆಂಗಳೂರು, ದಿ: 18ನೇ ಜುಲೈ 2007.

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ವೆಂಕಟೇಶಪ್ಪ, ನಿವೃತ್ತ ಎಪಿಸಿ–65, ಡಿ.ಎ.ಆರ್., ಕೋಲಾರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 1414

**ವಿಷಯ:** ಕೆ.ರಾಮರೆಡ್ಡಿ, ಎ.ಪಿ.ಸಿ. 10, ಡಿ.ಎ.ಆರ್. ದಾವಣಗೆರೆ ಜಿಲ್ಲೆ ರವರಮ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ. ದಾವಣಗೆರೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ(5): ಇವಿ:09: 2002-03 ಓ.ಬಿ.ಸಂಖ್ಯೆ:399:2003-04 ದಿನಾಂಕ:17/1/2004.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ ದಾವಣಗೆರೆ ಇವರ ಆದೇಶ ಸಂಖ್ಯೆ 42/ಅಪೀಲು/2003/04 ದಿನಾಂಕ:8/6/2005.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:7/6/2005.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು 2/121/2005 ದಿನಾಂಕ:2/1/2006.

**ಪ್ರಸ್ತಾವನೆ:**

ಶ್ರೀ. ಶ್ರೀರಾಮರೆಡ್ಡಿ, ಎಪಿಸಿ - 10 ಡಿ.ಎ.ಆರ್ ದಾವಣಗೆರೆ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಆಪಾದಿತರಾದ ಎಪಿಸಿ-10 ಡಿಎಆರ್, ದಾವಣಗೆರೆ ಆದ ನೀವು ಸರ್ಕಾರಿ ನೌಕರರಾಗಿದ್ದು ಅದರಲ್ಲೂ ಶಿಸ್ತಿನ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದು, ಡಿಎಆರ್, ಪೊಲೀಸ್ ವಸತಿ ಗೃಹಗಳಲ್ಲಿ ಪೊಲೀಸ್ ಸಿಬ್ಬಂದಿಯವರ ಪತ್ನಿಯರಿಂದ ಮತ್ತು ಸಾರ್ವಜನಿಕರಿಂದ ಪ್ರತಿ ತಿಂಗಳೂ ಹಣವನ್ನು ಸಂಗ್ರಹಿಸಿ ಯಾವುದೇ ಅಧಿಕೃತ ಪರವಾನಿಗೆ ಇಲ್ಲದೇ ಚೀಟಿ ವ್ಯವಹಾರಗಳನ್ನು ನಡೆಸಿ ಅತೀವ ಅಶಿಸ್ತು ಮತ್ತು ದುರ್ನಡತೆಯನ್ನು ಪ್ರದರ್ಶಿಸಿದ್ದೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ. ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:17/1/2004 ರ ಆದೇಶದಲ್ಲಿ ಅರ್ಜಿದಾರನ್ನು ಎ.ಪಿ.ಸಿ. ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ಮಟ್ಟಕ್ಕೆ ಆರು ವರ್ಷಗಳ ಕಾಲ ಇಳಿಸಿ ಆದೇಶಿಸಿದ್ದೇನೆ. ಆರು ವರ್ಷಗಳ ನಂತರ ಇವರು ಎಪಿಸಿ ಹುದ್ದೆಯ ಕನಿಷ್ಟ ವೇತನದಿಂದ ಹೊಸದಾಗಿ ವೇತನ ಬಡ್ತಿಗಳನ್ನು ಪಡೆಯತಕ್ಕದ್ದು. ಇವರು ದಿನಾಂಕ:22:8:2002 ರಿಂದ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವವರೆಗೂ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಲಾಗಿದೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:8/6/2005 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರದಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಚೀಟಿ ಹೂಡಿಕೆದಾರರುಗಳಿಗೆ ವಂಚಿಸಿರುವುದು ಇಲಾಖಾ ವಿಚಾರಣೆಯಲ್ಲಿ ಸಾಕ್ಷಿದಾರರುಗಳಿಂದ ಆರೋಪ ಸಾಬೀತಾಗಿರುತ್ತದೆ. ಶಿಸ್ತು ಪಾಲನೆ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಈ ಸಿಬ್ಬಂದಿ ತಮ್ಮ ಹುದ್ದೆಗೆ ಹಾನಿ ತರುವಂತಹ ಕೆಲಸ ಮಾಡಿರುವುದರಿಂದ ಇವರು ಮಾಡಿರುವ ಅಪರಾಧವನ್ನು ಕ್ಷಮಿಸಲು ಸಕಾರಣಗಳು ಇಲ್ಲ ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 131 ಪೊಸಿಅ 2007 ಬೆಂಗಳೂರು, ದಿನಾಂಕ:19ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ರಾಮರೆಡ್ಡಿ ಎಪಿಸಿ-10, ಡಿಎಆರ್ ದಾವಣಗೆರೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 1415

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಕೆಂಪೇಗೌಡ, ಎ.ಹೆಚ್.ಸಿ.–178 (ಹಾಲಿ 204), ಸಿ.ಎ.ಆರ್. (ಕೇಂದ್ರ), ಬೆಂಗಳೂರು ನಗರ ಇವರ ಪರಿಷ್ಕರಣಾ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಸಹಾಯಕ ಪೊಲೀಸ್ ಕಮೀಷನರ್ (2), ಸಿ.ಎ.ಆರ್.(ಕೇಂದ್ರ), ಬೆಂಗಳೂರು ಇವರ ಆದೇಶ ಸಂಖ್ಯೆ : ಶಿಕ್ಷೆ/ಎಸಿಪಿ(2)/34/2003–04, ದಿನಾಂಕ : 14.7.2004.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಸಿ.ಎ.ಆರ್.(ಕೇಂದ್ರ), ಬೆಂಗಳೂರು ಇವರ ಆದೇಶ ಸಂಖ್ಯೆ : ಶಿಕ್ಷೆ/107/ಡಿ.ಸಿ.ಪಿ./ಸಿ.ಎ.ಆರ್(ಕೇ)/2005–06, ದಿನಾಂಕ : 21–3–2006
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 20–6–2006.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು(2)/106/2006–07, ದಿನಾಂಕ : 2–4–2007.

**ಪ್ರಸ್ತಾವನೆ:**

ಶ್ರೀ.ಕೆಂಪೇಗೌಡ, ಎ.ಹೆಚ್.ಸಿ.–178 (ಹಾಲಿ 204), ಸಿ.ಎ.ಆರ್. (ಕೇಂದ್ರ), ಬೆಂಗಳೂರು ನಗರ ಇವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7 ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

ಮುಖ್ಯಪೇದೆ 178, ಶ್ರೀ.ಕೆಂಪೇಗೌಡ, 2ನೇ ವಿಭಾಗ, ಸಿ.ಎ.ಆರ್.(ಕೇಂದ್ರ), ಬೆಂಗಳೂರು ಆದ ನೀವು ಶ್ರೀಯುತ.ಎಸ್.ಬಿ.ಘಾಟಗೆ, ಅಧ್ಯಕ್ಷರು, ಕರ್ನಾಟಕ ಭೂ ಸೇನಾ ನಿಗಮ ರವರಲ್ಲಿ ಅಂಗರಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಸದರಿ ಅಧ್ಯಕ್ಷರು ಫೆಬ್ರವರಿ 2004 ರ ಮಾಹೆಯಲ್ಲಿ ಪದಚ್ಯುತರಾದ ಕಾರಣ ಅಂಗರಕ್ಷಕ ಕರ್ತವ್ಯದಿಂದ ವಾಪಸ್ ಬರುವಂತೆ ಜ್ಞಾಪನವನ್ನು ಹೊರಡಿಸಿ ದಿನಾಂಕ : 28–3–2004 ರಂದು ಪಿಸಿ–1128, ಶ್ರೀ.ಹನುಮಂತೇಗೌಡ ರವರ ಮುಖಾಂತರ ತಲುಪಿಸಲಾಗಿದ್ದು, ಸದರಿ ಜ್ಞಾಪನವನ್ನು ನಿಮ್ಮ ಶ್ರೀಮತಿಯವರಾದ ಜಯಲಕ್ಷ್ಮಿ ರವರು ಸಹಿ ಮಾಡಿ ಸ್ವೀಕರಿಸಿರುತ್ತಾರೆ. ನಂತರ ಮಾನ್ಯ ಡಿ.ಸಿ.ಪಿ. ಸಾಹೇಬರವರ ಆದೇಶ ಸಂಖ್ಯೆ: ಸಿವಿ(6)/01/2004–05, ದಿನಾಂಕ : 21–5–2004 ರ ಆದೇಶದಂತೆ ನಿಮ್ಮನ್ನು ಅಂಗರಕ್ಷಕ ಕರ್ತವ್ಯದಿಂದ ವಾಪಸ್ ಕರೆಸಿಕೊಳ್ಳಲು ಮತ್ತೊಂದು ಜ್ಞಾಪನ ಹೊರಡಿಸಿ ಜ್ಞಾಪನ ಪತ್ರ ತಲುಪಿದ 24 ಗಂಟೆಯೊಳಗೆ ಆರ್.ಪಿ.ಐ., 2ನೇ ವಿಭಾಗರವರ ಮುಂದೆ ಹಾಜರಾಗುವಂತೆ ಸೂಚಿಸಿ ಸದರಿ ಜ್ಞಾಪನ ಪತ್ರವನ್ನು ಪಿಸಿ–2691, ಶ್ರೀ.ಮಂಜುನಾಥ್ ರವರ ಮುಖಾಂತರವಾಗಿ ಕಳುಹಿಸಿಕೊಡಲಾಗಿದ್ದು, ಹೆಚ್.ಸಿ.–178, ಶ್ರೀ.ಕೆಂಪೇಗೌಡ ಆದ ನೀವು ದಿನಾಂಕ : 1–6–2004 ರಂದು ಬೆಳಿಗ್ಗೆ ಸದರಿ ಜ್ಞಾಪನವನ್ನು ಸಹಿ ಮಾಡಿ ಸ್ವೀಕರಿಸಿರುತ್ತೀರಿ. ಜ್ಞಾಪನ ಸ್ವೀಕರಿಸಿದ ನೀವು ದಿನಾಂಕ : 2.6.2004 ರಂದು ಬೆಳಿಗ್ಗೆ ಆರ್.ಪಿ.ಐ., 2ನೇ ವಿಭಾಗ ರವರ ಮುಂದೆ ಹಾಜರಾಗಬೇಕಿದ್ದು, ನೀವು ದಿನಾಂಕ : 14–6–2004 ರಂದು ಕರ್ತವ್ಯದ ಮೇಲೆ ಹಾಜರಾಗಿರುತ್ತೀರಿ. ಇದರಿಂದ ನೀವು ಹಿರಿಯ ಅಧಿಕಾರಿಗಳ ಆದೇಶವನ್ನು ಉಲ್ಲಂಘಿಸಿರುವುದಲ್ಲದೇ ನಿಮ್ಮ ಕರ್ತವ್ಯದಲ್ಲಿ ಅಶಿಸ್ತು, ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿಯನ್ನು ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಿ ಆರೋಪ ಸಾಭೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಸಹಾಯಕ ಪೊಲೀಸ್ ಕಮೀಷನರ್ (2), ಸಿ.ಎ.ಆರ್. (ಕೇಂದ್ರ), ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ : 1) ರಲ್ಲಿ ಓದಲಾದ ದಿನಾಂಕ : 14–7–2004 ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ ಮುಂದೂಡಲಾಗಿದೆ ಎಂದು ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಸಿ.ಎ.ಆರ್. (ಕೇಂದ್ರ), ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ 2) ರಲ್ಲಿ ಓದಲಾದ ದಿನಾಂಕ : 21.3.2006 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣಾ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಯನ್ನು ಪರಿಶೀಲಿಸಲಾಗಿದೆ.

ಅರ್ಜಿದಾರರು ಮೇಲಾಧಿಕಾರಿಗಳ ಆದೇಶವನ್ನು ಪಾಲನೆ ಮಾಡದೇ ಉಲ್ಲಂಘಿಸಿರುವುದಲ್ಲದೇ ಕರ್ತವ್ಯದಲ್ಲಿ ಅಶಿಸ್ತು, ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ವರ್ತಿಸಿರುವುದು ಸಾಭೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒ.ಇ/132/ಪೊಸಿಅ/2007, ಬೆಂಗಳೂರು, ದಿ: 18ನೇ ಜುಲೈ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಕೆಂಪೇಗೌಡ, ಎ.ಹೆಚ್.ಸಿ.–178 (ಹಾಲಿ 204), ಸಿ.ಎ.ಆರ್. (ಕೇಂದ್ರ), ಬೆಂಗಳೂರು ನಗರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಪಿ.ಆರ್. 1416 ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## FOREST, ECOLOGY AND ENVIRONMENT SECRETARIAT

**Sub :** Diversion of 8.280 ha. of forest land for the purpose of road widening from Kumbarwada to Sadashivagad coming under jurisdiction of Karwar Division in favour of EE, KSHIP, Yellapura, Uttara Kannada District.

**Read :**
1) Letter No.A5(2)GFL.CR.14/05-06, Dated:10.01.2006 of Principal Chief Conservator of Forests, Bangalore.
2) State Government letter No. FEE 17 FLL 2006, dated: 21.04.2006.
3) LetterNo.4-KRC-194/2005-BAN/1056,dated: 10.08.2006 of the Government of India, Ministry of Environment and Forests,Regional Office, South Zone, Bangalore.
4) State Government letter No. FEE 17 FLL 2006, dated: 28.03.2007.
5) Letter No.4-KRC-203/2006-BAN/18, dated: 14.05.2007 of Government of India, Ministry of Environment and Forests, Regional Office, South Zone, Bangalore.

**PREAMBLE:**

The Principal Chief Conservator of Forests, Bangalore vide his letter dated 10.01.2006 read at (1) above had submitted the proposal under Section 2 of Forest (Conservation) Act, 1980 for diversion of 8.280 ha. of forest land for the purpose of road widening from Kumbarwada to Sadashivgad in Karwar Division State Highway under World Bank Aided Karnataka State Highway Improvement project in favour of Executive Engineer, Karnataka State Highway Improvement Project division, Yellapur, U.K.District subject to certain conditions.

Accordingly, the proposal was recommended to Government of India, Ministry of Environment and Forests, Regional Office(South Zone), Bangalore vide State Government letter dated 21.04.2006 read at (2) above.

The Government of India, Ministry of Environment and Forests, Bangalore vide their letter dated 10.08.2006 read at (3) above have given in Principle approval (Stage-I) for diversion of 8.280 ha. of forest land subject to fulfillment of certain conditions and the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide his letter dated 23.02.2007 furnished his compliance report and the same has been sent to Government of India vide State Government letter dated: 28.03.2007 read at (4) above.

Finally, Government of India Ministry of Environment and Forests, Regional Office(South Zone), Bangalore vide their letter dated 14/05/2007 read at(5) above have conveyed their approval (Stage-II) under Section 2 of Forest (Conservation) Act,1980 for diversion of 8.280 ha. of forest land in Karwar Division, U.K. District for the purpose of road widening from Kumbarwada to Sadshivgad coming under the jurisdiction of Karwar Division in favour of the Executive Engineer, KSHIP, Yellapur, U.K.District subject to the certain conditions.

The proposal has been examined in detail and hence the order.

**Government Order No. FEE 17 FLL 2006, Bangalore, Dated: 28th July 2007.**

In the Circumstances explained in the preamble above, Government are pleased to accord approval under Section 2 of Forest (Conservation) Act,1980 for diversion of 8.280 ha. of forest land in Karwar Division, U.K. District for the purpose of road widening from Kumbarwada to Sadshivgad coming under the jurisdiction of Karwar Division in favour of the Executive Engineer, KSHIP, Yellapur, U.K.District subject to the following conditions.

1. The legal Status of the forest land shall remain unchanged.
2. The Compensatory Afforestation shall be raised over double the extent of degraded forest land at the cost of user agency.
3. The funds received from the user agency towards CA and NPV under this project shall be transferred to Ad-hoc CAMPA in account number CA 1578 of Corporation Bank, Block-II, CGO Complex, Phase-I, Lodhi Road, New Delhi-110 003.
4. The total forest area utilized for the project shall not exceed 8.280 ha. and it shall be utilized only for the purpose for which it is diverted. In case the land is not used for the stipulated purpose, or when it is no longer needed for the said purpose then the area will be resumed by the Forest Department.
5. The lease is in perpetual basis.
6. If the land is not utilized for the purpose within 2 years and also if any violation is found of the stipulated conditions, the forest land shall revert back to Department after due approval from Government by the Conservator of Forests under section 82 (read with section 69 of Karnataka Forest Rules) of Karnataka Forest Act, 1963.
7. The user agency has to pay the lease rent as fixed by the Government at the time of sanction and any subsequent orders in this regard.
8. The Karnataka Forest Act 1963 and Rules 1969 will be applicable for any violation.
9. Only minimum number of trees shall be cut out of the enumerated list based on actual requirement of the project.
10. The user agency shall pay the extraction and transportation charges of trees as estimated by the Deputy Conservator of Forests from the proposed land.
11. The user agency shall pay the cost of raising compensatory afforestation over an extent of 16.56 ha. of degraded forest land at the rate prevailing at the time of sanction (at present it is Rs. 54,200-00 per ha.).
12. The User Agency has to pay the Net Present Value (NPV) fixed by the Govt. Notification No.FEE 247 FGL 2002 dated 17/01/2004.
13. The project Authorities should pay cost of soil erosion controlling structures to be constructed within the forest area all along the road.
14. The shoulder drains should be suitably covered with stone pitching in order to control soil erosion.
15. Fire for melting of coal tar and mixing shall be lit at a safe distance from the trees/vegetation, which shall be decided by the concerned Divisional Forest Officer. For such constructions, it is better to avoid dry/hot windy seasons. For this purpose, fuel-wood shall be purchased by the implementing agency in advance from the depot of State Forest Development Corporation.
16. No crushing/breaking of stones shall be allowed inside forest area. Readymade materials shall be used for ;upgradation of such roads.
17. Both sides of the upgraded roads shall be reinforced with brick/stone works and vegetative measures to check soil erosion, at the project cost in consultation with the Divisional Forest Officer.
18. Plantation activities, if the concerned Divisional Forest Officer finds it necessary shall be taken up along the road at the project cost immediately. The plantation shall be maintained at the project cost.
19. No work shall be allowed after sunset.

20. No Labour Camp shall be established on the forest lands.
21. Any damage to forest area due to such up-gradation works shall be compensated by the implementing agency from the project cost. The extent of damage shall be assessed by the concerned Divisional Forest Officer.
22. The user agency shall abide by all the conditions imposed upon by Government of India, Government of Karnataka and Principal Chief Conservator of Forests.
23. Any other condition to be stipulated by /Government of India/State Government /Principal Chief Conservator of Forests, Karnataka in the interest of conservation of forests.

By order and in the name of the Governor of Karnataka,

**P.R.KALAVATHI**

Under Secretary to Government,

Forest, Ecology and Environment Department.

P.R. 1471

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಟಿ.ಬಸವರಾಜು ಸಿಪಿಸಿ-943, ಚಿತ್ರದುರ್ಗ ಪೊಲೀಸ್ ಠಾಣೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, (ಪೂರ್ವ ವಲಯ) ದಾವಣಗೆರೆ ಇವರ ಆದೇಶ ಸಂಖ್ಯೆ:2 ಇವಿ/4/2003-04 ಒ.ಬಿ.ಸಂಖ್ಯೆ:83/2004-05 ದಿನಾಂಕ:6-9-2004
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಮನಿ ಮತ್ತು ಆಮನಿ ಬೆಂಗಳೂರು (ಪೂರ್ವ ವಲಯ) ಅಪೀಲು-6/34/2004-05 ದಿನಾಂಕ:15-02-2005
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:10-03-2006
4. ಕಾರ್ಯದರ್ಶಿ ಕರ್ನಾಟಕ ಲೋಕ ಸೇವಾ ಆಯೋಗ ಪತ್ರ ಸಂಖ್ಯೆ:PSC 46/CNS 2007 ದಿ:28.06.2007

**ಪ್ರಸ್ತಾವನೆ:**

ಶ್ರೀ ಟಿ.ಬಸವರಾಜು ಸಿಪಿಸಿ-943, ಚಿತ್ರದುರ್ಗ ಪೊಲೀಸ್ ಠಾಣೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶ್ರೀ.ಟಿ.ಬಸವರಾಜ್ ಸಿಪಿಸಿ-943 ಪರಶುರಾಂಪುರ ಪೊಲೀಸ್ ಠಾಣೆ ಆದ ನೀವು ಈಗ್ಗೆ ನಾಲ್ಕು ವರ್ಷಗಳ ಹಿಂದೆ ದಾವಣಗೆರೆ ಜಿಲ್ಲೆ ಹದಡಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗಿನಿಂದಲೂ ಕುಮಾರಿ ಅಂಬುಜಾ ತಂದೆ, ರೇವಣಸಿದ್ದಪ್ಪ ಎಂಬುವರೊಂದಿಗೆ ಮದುವೆಯಾಗುತ್ತೇನೆಂದು ನಂಬಿಸಿ ಆಕೆಯೊಂದಿಗೆ ಅನೈತಿಕ ಸಂಬಂಧ ಬೆಳೆಸಿದ್ದು, ಇದರಿಂದ ಆಕೆ ನಾಲ್ಕು ಬಾರಿ ಗರ್ಭ ಧರಿಸಿದ್ದು, ನಾಲ್ಕು ಬಾರಿಯೂ ಗರ್ಭಪಾತ ಮಾಡಿಸಿ ಆಕೆಗೆ ಗೊತ್ತಿಲ್ಲದ ಹಾಗೆ ವರ್ಗಾವಣೆ ಮಾಡಿಸಿಕೊಂಡು ಬಂದಿದ್ದು, ಆಕೆಯ ಮನೆಗೆ ಬಂದು ಕೇಳಿದಾಗ ಮದುವೆಯಾಗುವುದಿಲ್ಲ, ಈ ವಿಚಾರ ಯಾರಿಗಾದರೂ ಹೇಳಿದರೆ ಕೊಲೆ ಮಾಡುತ್ತೇನೆಂದು ಪ್ರಾಣ ಬೆದರಿಕೆ ಹಾಕಿರುತ್ತಾರೆ. ಈ ರೀತಿ ಶಿಸ್ತಿನ ಇಲಾಖೆಯಲ್ಲಿ ಜವಾಬ್ದಾರಿಯುತ ಪೊಲೀಸ್ ಸಿಬ್ಬಂದಿಯಾಗಿ ಕುಮಾರಿ ಅಂಬುಜಾ ಎಂಬುವವರನ್ನು ನಂಬಿಸಿ, ಮೋಸ ಮಾಡಿ ಪ್ರಾಣ ಬೆದರಿಕೆ ಹಾಕಿ ದಾವಣಗೆರೆ ಬಡಾವಣೆ ಠಾಣೆ ಮೊಕದ್ದಮೆ ಸಂಖ್ಯೆ:4/2003 ಕಲಂ 313, 376, 417, 506 ಐಪಿಸಿ ರೀತ್ಯ ಕ್ರಿಮಿನಲ್ ಪ್ರಕರಣದಲ್ಲಿ ಆರೋಪಿಯಾಗಿ ಕರ್ತವ್ಯದಲ್ಲಿ ಘೋರ ದುರ್ನಡತೆ ಮತ್ತು ಅತೀವ ನಿರ್ಲಕ್ಷತೆ ಪ್ರದರ್ಶಿಸಿರುತ್ತೀರಿ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. JMFC ನ್ಯಾಯಾಲಯ ದಾವಣಗೆರೆಯಲ್ಲಿ ವಿಚಾರಣೆ ನಡೆದು, ಪ್ರಕರಣವು ದಿನಾಂಕ:30-03-2004 ರಂದು ತೀರ್ಪು ನೀಡಿದ್ದು, ಅದರಲ್ಲಿ ಅರ್ಜಿದಾರರನ್ನು ದೋಷಮುಕ್ತರನ್ನಾಗಿ ಮಾಡಿದೆ ಹಾಗೂ ಅರ್ಜಿದಾರರು ಇನ್ನು ಚಿಕ್ಕವಯಸ್ಸಿನವರಾಗಿದ್ದು ಸೇವೆಯಿಂದ ವಜಾ ಮಾಡಿದಲ್ಲಿ ಬೇರೆ ಕೆಲಸವಿಲ್ಲದೆ ಸಮಾಜದಲ್ಲಿ ದುಶ್ಚಟಗಳಿಗೆ ಬಲಿಯಾಗಿ ಕಂಟಕವಾಗಬಹುದಾದ ಸಂಭವವಿರುವುದರಿಮದ ಶಿಸ್ತು ಪ್ರಾಧಿಕಾರಿಯ ದಂಡನಾದೇಶವನ್ನು ರದ್ದುಪಡಿಸಿ, ಈ ಕೆಳಕಂಡಂತೆ ದಂಡನೆಯನ್ನು ವಿಧಿಸಲು ಸರ್ಕಾರವು ಉದ್ದೇಶಿಸಿದೆ.

1) ಅರ್ಜಿದಾರರನ್ನು ಪುನರ್ ಸೇವೆಗೆ ನೇಮಕ ಮಾಡುವುದು;

2) ಅರ್ಜಿದಾರರ ವೇತನವನ್ನು ಪಿಸಿ ಹುದ್ದೆಯ ಕನಿಷ್ಠ ಮಟ್ಟಕ್ಕೆ 10 ವರ್ಷಗಳ ಅವಧಿಗೆ ಇಳಿಸಿ, ಈ ಅವಧಿಯಲ್ಲಿ ಯಾವುದೇ ವಾರ್ಷಿಕ ವೇತನ ಬಡ್ತಿ ಗಳಿಸದೇ ದಂಡನಾ ಆದೇಶ ಅವಧಿಯ ನಂತರ ದಂಡನಾದೇಶಕ್ಕೆ ಹಿಂದಿನ ದಿನಾಂಕದಂದು ಪಡೆಯುತ್ತಿದ್ದ ವೇತನ ಹಂತದಿಂದ ವಾರ್ಷಿಕ ವೇತನ ಬಡ್ತಿ ಗಳಿಸತಕ್ಕದ್ದು;

3) ವಜಾಗೊಂಡ ದಿನಾಂಕದಿಂದ ಸೇವೆಗೆ ಪುನರ್ ನೇಮಕಗೊಂಡು ಕರ್ತವ್ಯಕ್ಕೆ ಹಾಜರಾಗುವ ದಿನಾಂಕದ ವರೆಗಿನ ಅವಧಿಯನ್ನು ಕರ್ತವ್ಯದಿಂದ ಹೊರಗುಳಿದ (Dies non) ಅವಧಿಯೆಂದು ಪರಿಗಣಿಸುವುದು;

4) ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸುವುದು;

ಈ ಸಂಬಂಧ ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಆಯೋಗವು ದಿ:28-06-2007ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 221 ಪೊಸಿಅ 2005 ಬೆಂಗಳೂರು, ದಿನಾಂಕ:08ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಟಿ.ಬಸವರಾಜ್ ಸಿಪಿಸಿ-943 ಪರಶುರಾಂಪುರ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

1) ಶಿಸ್ತು ಪ್ರಾಧಿಕಾರಿಯ ದಂಡನಾದೇಶವನ್ನು ರದ್ದು ಪಡಿಸಿ, ಅರ್ಜಿದಾರರನ್ನು ಸೇವೆಗೆ ಪುನರ್ ನೇಮಕ ಮಾಡುವುದು.

2) ಅರ್ಜಿದಾರರ ವೇತನವನ್ನು ಪಿಸಿ ಹುದ್ದೆಯ ಕನಿಷ್ಟ ಮಟ್ಟಕ್ಕೆ ಹತ್ತು ವರ್ಷಗಳ ಅವಧಿಗೆ ಇಳಿಸಿ, ಈ ಅವಧಿಯಲ್ಲಿ ಯಾವುದೇ ವಾರ್ಷಿಕ ವೇತನ ಬಡ್ತಿ ಗಳಿಸದೇ ದಂಡನಾದೇಶ ಅವಧಿಯ ನಂತರ ದಂಡನಾದೇಶಕ್ಕೆ ಹಿಂದಿನ ದಿನಾಂಕದಂದು ಪಡೆಯುತ್ತಿದ್ದ ವೇತನ ಹಂತದಿಂದ ವಾರ್ಷಿಕ ಬಡ್ತಿ ಗಳಿಸತಕ್ಕದ್ದು.

3) ವಜಾಗೊಂಡ ದಿನಾಂಕದಿಂದ ಸೇವೆಗೆ ಪುನರ್ ನೇಮಕಗೊಂಡು ಕರ್ತವ್ಯಕ್ಕೆ ಹಾಜರಾಗುವ ದಿನಾಂಕದವರೆಗಿನ ಅವಧಿಯನ್ನು ಕರ್ತವ್ಯದಿಂದ ಹೊರಗುಳಿದ (ಡೈಸ್ ನಾನ್) ಅವಧಿಯೆಂದು ಪರಿಗಣಿಸುವುದು.

4) ಅಮಾನತ್ತಿನ ಅವಧಿಯನ್ನು ಅಮನತ್ತೆಂದೇ ಪರಿಗಣಿಸುವುದು.

ಈ ಆದೇಶವು ಶಿಸ್ತು ಪ್ರಾಧಿಕಾರವು ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC 46 CNS 2007 ದಿನಾಂಕ:28-6-2007 ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 1474

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಟಿ.ಹೆಚ್.ಕರೀಕಲ್, ಪಿ.ಎಸ್.ಐ., ಸಂಚಾರಿ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ. ಗುಲ್ಬರ್ಗಾ, ಇವರ ಆದೇಶ ಸಂಖ್ಯೆ:ಪಿ.ಆರ್.170/2004 ಒ.ಬಿ.ಸಂಖ್ಯೆ:1086/2004-05 ದಿನಾಂಕ:7-7-2005
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಮನಿ (ಈಶಾನ್ಯ ವಲಯ) ಗುಲ್ಬರ್ಗಾ ಇವರ ಆದೇಶ ಸಂಖ್ಯೆ:ಅಪೀಲು/77/ಈವ 2005/ ಆಪು ಸಂಖ್ಯೆ:447/ಈವ/2005 ದಿನಾಂಕ:7:11:2005
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:10-03-2006
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು (ಅ)47/2006 ದಿನಾಂಕ:24-6-2006

**ಪ್ರಸ್ತಾವನೆ:**

ಶ್ರೀ ಟಿ.ಹೆಚ್.ಕರೀಕಲ್, ಪಿ.ಎಸ್.ಐ., ಸಂಚಾರಿ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1992 ರಿಂದ ಪತ್ತೆಯಾದ ಸ್ವತ್ತಿನ ಪ್ರಕರಣಗಳಲ್ಲಿ ಎಂ.ಓ.ಬಿ. ಕಾರ್ಡಗಳು ತೆರೆದು ಸಲ್ಲಿಸುವಂತೆ ಆದೇಶಿಸಿದ್ದರೂ ಕೂಡಾ ಸಲ್ಲಿಸದೇ, ಕಾರ್ಯ ವಿಮುಖತೆ ಹಾಗೂ ಮೇಲಾಧಿಕಾರಿಗಳ ಆದೇಶ ಪಾಲಿಸದೇ ದುರ್ನಡತೆ ಹಾಗೂ ಅಶಿಸ್ತು ಪ್ರದಶಿಸಿದ ಬಗ್ಗೆ.

ಮೇಲ್ಕಾಣಿಸಿದ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಇವರ ಆದೇಶದ ವಿರುದ್ಧ ಶ್ರೀ ಟಿ.ಎಚ್.ಕರೀಕಲ್. ಪಿ.ಎಸ್..ಐ. ಇವರು ಮೇಲ್ಮನವಿಯನ್ನು ತಯಾರಿಸಿ ಈ ಕಚೇರಿಗೆ ಸಲ್ಲಿಸಿದ ದಾಖಲಾತಿಗಳು ತರಿಸಿಕೊಂಡು ಪರಿಶೀಲಿಸಲಾಗಿ, ಅಪೀಲುದಾರರು 1992 ರಿಂದ ಪತ್ತೆಯಾದ ಸ್ವತ್ತಿನ ಪ್ರಕರಣಗಳಲ್ಲಿ ಎಂ.ಓ.ಬಿ. ಕಾರ್ಡಗಳು ತೆರೆದು ಸಲ್ಲಿಸುವಂತೆ ಆದೇಶಿಸಿದ್ದರೂ ಕೂಡಾ, ಅವುಗಳನ್ನು ತೆರೆದು ಸಲ್ಲಿಸದೇ ಕಾರ್ಯ ವಿಮುಖತೆ ಪ್ರದಶಿಸಿರುವುದರಿಂದ ಎಸ್.ಪಿ.ಗುಲಬರ್ಗಾ ಇವರು ಅಪೀಲುದಾರರ ವಿರುದ್ಧ ತೆಗೆದುಕೊಂಡ ಶಿಸ್ತಿನ ಕ್ರಮವು ಸಮರ್ಥನೀಯವಾಗಿರುತ್ತದೆ. ಆದ್ದರಿಂದ ಸದರಿಯವರ ಮೇಲ್ಮನವಿಯಲ್ಲಿ ಪರಿಗಣಿಸಬಹುದಾದ ಅಂಶಗಳು ಕಂಡು ಬಂದಿರುವುದಿಲ್ಲ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ.ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:7-7-2005 ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಆರು ತಿಂಗಳುಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರದಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರ್ದೇಶಕರು (ಈಶಾನ್ಯ ವಲಯ) ಗುಲ್ಬರ್ಗಾ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:7-11-2005 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರನ್ನು 2 ವರ್ಷಗಳ ಅವಧಿಯಲ್ಲಿ 10 ಬಾರಿ ವರ್ಗಾವಣೆಯನ್ನು ಮಾಡಿರುವುದರಿಂದ MOB ಕಾರ್ಡಗಳನ್ನು ತೆಗೆಯುವುದರಲ್ಲಿ ವಿಳಂಬವಾಗಿರುತ್ತದೆ. ಇದರಿಂದ ಇವರ ಅಪರಾಧವೇನು ಇಲ್ಲ ಎಂದು ಪರಿಗಣಿಸಿ ಶಿಸ್ತುಪ್ರಾಧಿಕಾರಿಯ ದಂಡನಾದೇಶವನ್ನು ರದ್ದು ಪಡಿಸಿ ವಾರ್ಷಿಕ ವೇತನ ಬಡ್ತಿಯನ್ನು ಸಕ್ರಮಗೊಳಿಸಲು ಸರ್ಕಾರ ಉದ್ದೇಶಿಸಿ, ಕರ್ನಾಟಕ ಲೋಕ ಸೇವ ಆಯೋಗವು ದಿನಾಂಕ:3-4-2007ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ, ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 400 ಪೊಸಿಅ 2006 ಬೆಂಗಳೂರು, ದಿನಾಂಕ:31ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಟಿ.ಹೆಚ್.ಕರೀಕಲ್, ಪಿ.ಎಸ್.ಐ., ಸಂಚಾರಿ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

1) ಶಿಸ್ತು ಪ್ರಾಧಿಕಾರಿಯ ದಂಡನಾದೇಶವನ್ನು ರದ್ದುಪಡಿಸಿ, ವಾರ್ಷಿಕವೇತನ ಬಡ್ತಿಯನ್ನು ಸಕ್ರಮಗೊಳಿಸಿ, ಬಿಡುಗಡೆ ಮಾಡಲು ಆದೇಶಿಸಿದೆ.

2)ಈ ಆದೇಶವು ಶಿಸ್ತು ಪ್ರಾಧಿಕಾರವು ಹೊರಡಿಸಿದ ಆದೇಶ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC 229 CNS 2006 ದಿನಾಂಕ:3-4-2007 ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1475

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## FOREST, ECOLOGY AND ENVIRONMENT SECRETARIAT

**Sub :** Diversion of 1.28 ha. of forest land for laying water supply pipeline and construction of pump house in favour of M/s Bharat Sugar Mills Ltd., Haliyal in Uttara Kannada District.

**Read :**
1) Letter No. A5(2)GFL.CR.26/06-07,Dated: 21.11.06 and No.A5(2)GFL.CR.34/06-07, dated: 10.4.2007 of the Principal Chief Conservator of Forests, Bangalore.
2) State Government letter No. FEE 205 FLL 2006, dated:15.05.2007.
3) Letter No.4-KRB 357/2006-BAN/149, dated: 04.06.2007 of Government of India, Ministry of Environment and Forests, Regional Office (Southern Zone),Bangalore.
4) State Government letter No. FEE 205 FLL 2006, dated: 17.07.2007.
5) Letter No. No.4-KRB 357/2006-BAN/526, dated: 02.08.2007 of Government of India, Ministry of Environment and Forests, Regional Office (Southern Zone), Bangalore.

**PREAMBLE:**

The Principal Chief Conservator of Forests, Bangalore vide his letter No.A5(2)GFL.CR.26/06-07, dated: 21.11.2006 and No.A5(2)GFL.CR.34/06-07, dated 10.04.2007 read at (1) above has submitted the proposal under section (2) of Forest (Conservation) Act,1980 for diversion of 1.28 ha. (1.00 + 0.28) of forest land in which diversion of 1.00 ha. of forest land for purpose of laying pipe line for supply water to Hullali Village, Dandeli to Haliyal along the Dandeli to Haliyal State Highway passing through the forest land and diversion of 0.28 ha. of forest land for construction of pump house in favour of M/s Bharath Sugar Mills Ltd., Haliyal subject to certain conditions.

Accordingly, the proposal was recommended to Government of India Ministry of Environment and Forests, Regional Office (Southern Zone), Bangalore vide State Government letter dated:15.05.2007 read at (2) above.

The Government of India, Ministry of Environment and Forests, Regional Office(Southern Zone), Bangalore vide their letter dated: 04.06.2007 read at (3) above have given in principle approval (Stage-I) for diversion of 1.28 ha. of forest land subject to fulfillment of certain conditions and the same was communicated to the Principal Chief Conservator of Forests, Bangalore for compliance

The Principal Chief Conservator of Forests, Bangalore vide his letter dated 23-06-2007 has furnished his compliance report and the same has been sent to Government of India vide State Government letter dated 17.7.2007 read at (4) above.

Finally, the Government of India Ministry of Environment and Forests, Regional Office(Southern Zone), Bangalore vide their letter dated 02-08-2007 read at(5) above have conveyed their approval (Stage-II) under Section(2) of Forest(Conservation)Act, 1980 for diversion of 1.28 ha. of forest land in Haliyal Forest Division for laying water supply pipeline and construction of pump house and approach road in favour of M/s Bharath Sugar Mills Ltd., Haliyal, Uttara Kannada District subject to certain conditions:

The proposal has been examined in detail and hence the order.

**GOVERNMENT ORDER NO. FEE 205 FLL 2006, BANGALORE, DATED: 09th August 2007.**

In the Circumstances explained in the preamble above, Government are pleased to accord approval under Section 2 of Forest (Conservation) Act,1980 for diversion of 1.28 ha. of forest land in Haliyal Forest Division for laying water supply pipeline and construction of pump house and approach road in favour of M/s Bharath Sugar Mills Ltd., Haliyal, Uttara Kannada District subject to the following conditions:

1. The legal Status of the forest land shall remain unchanged.
2. Compensatory afforestation shall be raised over double the degraded forest land (2.56 ha.) at the cost of user agency.
3. The funds received from the user agency towards Compensatory Afforestation and NPV under this project shall be transferred to Ad-hoc CAMPA in account number CA 1582 of Corporation Bank, Block-II,CGO Complex, Phase-I, Lodhi Road, New Delhi-110003 immediately under intimation to Government of India.
4. The total forest area utilized for the project shall not exceed 1.28 ha.and it shall be used only for the purpose for which it is diverted. In case the land is not used for the stipulated purpose or when it is no longer needed for the said purpose, then the area will be resumed by the Forest Department.
5. The land shall be utilized only for the purpose for which it is released.
6. If the land is not required for the purpose for which it is granted the same should be resumed back to the Forest Department by the Conservator of Forests under section 82 of Karnataka Forest Act 1963.
7. The user agency has to pay the lease rent as fixed by the Government at the time of sanction and any subsequent orders in this regard.
8. The lease is granted for 10 years.
9. Karnataka Forest Act 1963 and Rules 1969 will be applicable for any violation.

10. If the land is not utilized for the purpose within 2 years, the forest land shall be resumed back by the Conservator of Forests by following the provisions under section 82 of Karnataka Forest Act, 1963.
11. The cost of raising compensatory afforestation in degraded forest land shall be paid by the user agency.
12. The user agency has to pay the Net Present Value as per the Government Notification dated: 17.1.2004(at Rs. 5.80 to Rs. 9.20 lakhs per ha. depending upon the quantity and density of the land).
13. Any other condition to be stipulated by /Government of India/State Government /Principal Chief Conservator of Forests, Karnataka in the interest of conservation of forests will have to be abided by the lessee.

By order and in the name of the Governor of Karnataka,

**P.R.KALAVATHI**

P.R. 1478

Under Secretary to Government,

Forest, Ecology and Environment Department.

**Sub :** Diversion of 15 ha. of forest land for mining lease at Siddapur Village, Sandur Range of Bellary District in favour of Sri. Shaiksab.

**Read :**
1) Letter No. A5 (B1) MNG.CR.110/93-94, dated:17-06-1996 of the Principal Chief Conservator of Forests, Bangalore.
2) State Government letter No.FEE 52 FFM 96, dated 16/18-07-1996.
3) Government of India Ministry of Environment and Forests, Regional Office, South Zone, Bangalore letter No.F(C)A/16.1/KAR/56/MIN,dated:1st February 2005.
4) Letter No. A5 (1) MNG.CR.110/93-94, dated:05-01/02-2007 of the Principal Chief Conservator of Forests, Bangalore.
5) State Government letter No.FEE 34 FFM 2007, dated 09-02-2007.
6) Government of India Ministry of Environment and Forests, Regional Office, South Zone, Bangalore letter No.F(C)A/16.1/KAR/56/MIN/2325,dated: 9th March 2007.

**PREAMBLE:-**

The Principal Chief Conservator of Forests had sent proposal vide his letter dated: 17-06-1996 read at (1) above for diversion of 15 ha. of forest land in Siddapur Village, Sandur Range, Bellary District in favour of Shri. N.Shaiksab of Hospet for a period of 10 years subject to certain conditions.

The proposal of the Principal Chief Conservator of Forest was recommended to Government of India, Ministry of Environment and Forests, Regional Office, South Zone, Bangalore vide Government letter dated: 16/18-07-1996 read at (2) above seeking prior approval of Government of India under section 2 of Forest (Conservation) Act, 1980.

After careful consideration of the proposal of the State Government, Government of India vide its letter dated: 1st February 2005 read at (3) above has agreed in-principle subject to the fulfillment of certain conditions.

In compliance of the conditions stipulated by Government of India vide its letter dated: 1st February 2005 the Principal Chief Conservator of Forests vide his letter dated: 05-01/02-2007 read at (4) above has sent his compliance report. This compliance report was forwarded to Government of India vide State Government letter dated: 09-02-2007 read at (5) above.

Finally Government of India vide its letter dated: 9th March 2007 read at (6) above has conveyed its Stage-II approval under Section 2 of Forest (Conservation) Act, 1980 for diversion of 15 ha. of forest land in Siddapur Village, Sandur Range, Bellary District in favour of Shri. N.Shaiksab of Hospet for a period of 10 years subject to certain conditions. Hence the order.

**GOVT. ORDER NO:FEE 34 FFM 2007, BANGALORE, DATED:06th August 2007**

In the circumstances explained above, Government are pleased to accord sanction under Section 2 of Forest(Conservation)Act, 1980 for diversion of 15 ha. of forest land in Siddapur Village, Sandur Range, Bellary District in favour of Shri. N.Shaiksab of Hospet for a period of 10 years subject to the following conditions.

1. Legal status of forest land shall remain unchanged.
2. Demarcation of forest area proposed for the project shall be carried out by erecting 4 feet high RCC pillars duly numbered serially forward and backward at the cost of user agency.
3. Compensatory Afforestation(CA) shall be raised over 15.00 ha. of identified non-forest land at Sy.No.326 of Janikunta Village, of Bellary taluk at the cost of user agency. Prior permission of Central Government for change of location and schedule of compensatory afforestation, if any, shall be obtained through State Government.
4. The Non-forest land for CA shall be notified by the State Government as RF/PF under Section-4 or PF under Section 29 of Indian Forest Act, 1927 or the State Forest Act within a period of 6 months and Nodal Officer(FC) shall report the compliance.
5. The funds received from the user agency towards NPV & CA, under this project shall be transferred to Ad-hoc CAMPA in account number CA 1582 of Corporation Bank, Block-II, CGO Complex, Phase-I, Lodhi Road, New Delhi-110 003 with an intimation to Government of India .
6. The State Forest Department shall raise and maintain a safety zone and will also raise and maintain the plantation over an area, one and half times of the extent of the safety zone, of the degraded forest land elsewhere at the project cost.
7. Reclamation plan shall be executed by the user agency from the very first year of mining and an annual report shall be sent to the Nodal Officer and the Regional Office, Bangalore.
8. The user agency shall protect the top soil at the project cost.
9. The mining activity in the forest area shall be carried out as per the approved mining plan from the IBM.
10. The Environmental clearance shall be obtained from the Ministry of Environment and Forests as per the provisions of Environment (Protection) Act, 1986.
11. The consent of State Pollution Control Board shall be obtained under Air and Water Act before the commencement of mining operation and it shall be renewed every year.
12. Trees shall be felled only when it becomes necessary and in the supervision of State Forest Department.
13. No labour camps shall be established on the forest land.
14. Sufficient firewood shall be provided by the user agency to the labourers at the project cost after purchase from the State Forest Department or Forest Development Corporation.
15. The user agency shall ensure that there should be no damage to the wildlife.
16. The forest land shall not be used for any purpose other than that specified in the proposal and shall not exceed 15 ha.
17. The applicant has deposited a sum of Rs. 8,13,000/- over an area of 15.00 ha. of the rate of Rs. 54,200/-per ha. vide D.D.No.434885, dated: 17.1.2007 of the State Bank of Mysore, Bangalore towards the cost of raising and maintenance of compensatory afforestation.
18. The lessee should pay land lease rent at the rate of Rs. 1000/- per ha. or part thereof per annum and Rs. 187.50 per ha. per annum towards supervision charges.
19. The lessee should open a firewood depot to the employees and labourers at the subsidized rates and the quantity to be prescribed by the Conservator of Forests or Deputy Conservator of Forests concerned.
20. The lessee should take up planting work on the static dumps during the advance mining operations.
21. The lessee should undertake afforestation measures in the area proposed for afforestation and also in other blank areas of the leased area.
22. The lessee should carry out soil and water conservation measures as suggested by the Forest Department.
23. The Company should protect and nurture the natural growth in the area proposed for lease.
24. The lessee should undertake to protect rigidly the leased area and the area surrounding forest area upto 1 Km distance from fire.

25. The lessee should not cut the trees without prior permission of the Forest Department and all produce of permitted felling should be handed over to the Forest Department under cover of receipt of Transportation of ore should be strictly under transit rules.
26. The lessee should execute an agreement with the Department binding himself to abide by usual terms and conditions imposed by Karnataka Forest Department.
27. In case of violation of agreement condition the Forest Department shall have right to suspend the mining activities works.
28. The lessee has to pay the Net Present Value (NPV) fixed by the Government Notification No.FEE 247 FGL 2002 dated 17/01/2004.
29. Any other condition that the State Government or the Chief Conservator of Forests (Central), Regional Office, Bangalore may impose from time to time in the interest of conservation, protection and development of forests.

By order and in the name of the Governor of Karnataka,

**P.R. KALAVATHI**

P.R. 1479

Under Secretary to Govt.

Forests, Ecology and Environment Department.

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ.ಶಾಮೀದ್ ಬಾಷಾ, ಪಿ.ಎಸ್.ಐ., ಬಸವನಗರ ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಇವರ ಆದೇಶ ಸಂಖ್ಯೆ : ಸಿಬ್ಬಂದಿ/5/ಇ.ವಿ/2/21/2004, ದಿನಾಂಕ : 22–7–2004.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಾವಣಗೆರೆ ಇವರ ಆದೇಶ ಸಂಖ್ಯೆ : 27/ಅಪೀಲು/2004–05, ದಿನಾಂಕ : 7–3–2005.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು/2/125/2005, ದಿನಾಂಕ : 7–2–2007.

**ಪ್ರಸ್ತಾವನೆ:**

ಶ್ರೀ.ಶಾಮೀದ್ ಬಾಷಾ, ಪಿ.ಎಸ್.ಐ., ಬಸವನಗರ ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ ಇವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7 ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

ಡಿ.ಎಸ್.ಪಿ., ದಾವಣಗೆರೆ ನಗರ ಉಪವಿಭಾಗ ರವರ ಉಲ್ಲೇಖಿತ ವರದಿಯಲ್ಲಿ ನಿಮಗೆ ಡಿ.ಎಸ್.ಪಿ., ನಗರ ಉಪವಿಭಾಗರವರು ಅನೇಕ ಬಾರಿ ಮೌಖಿಕ ಹಾಗೂ ಲಿಖಿತವಾಗಿ ನಿಮ್ಮ ಠಾಣೆ ವ್ಯಾಪ್ತಿಯಲ್ಲಿ ಮಟ್ಕಾ ಹಾಗೂ ಜೂಜಾಟವನ್ನು ತಡೆಗಟ್ಟಲು ಸೂಚನೆ ನೀಡಿದ್ದರೂ ಸಹ ನೀವು ಈ ಬಗ್ಗೆ ಪ್ರಾಮಾಣಿಕ ಪ್ರಯತ್ನಗಳನ್ನು ಮಾಡದೇ ವಿಫಲರಾಗಿದ್ದರಿಂದ ಡಿ.ಎಸ್.ಪಿ., ನಗರ ಉಪವಿಭಾಗ ರವರು ತಮಗೆ ಬಂದ ಖಚಿತ ಮಾಹಿತಿ ಮೇಲೆ ಪಿ.ಎಸ್.ಐ., ಶ್ರೀ.ಮಹೇಶ್ ಮತ್ತು ಸಿಬ್ಬಂದಿಯವರಿಂದ ದಿನಾಂಕ : 6–10–2003, 8–10–2003, 20–10–2003 ರಂದು ದಾಳಿ ನಡೆಸಿ, ಮಟ್ಕಾ ಚೀಟಿ ಹಾಗೂ ಪಡ್ಡೆ ಹಣವನ್ನು ಅಮಾನತ್ತುಪಡಿಸಿಕೊಂಡು ಕೆ.ಟಿ.ಜಿ.ನಗರ ಠಾಣೆ ಗುನ್ಹೆ ಸಂಖ್ಯೆ : 206/2003, 207/2003, 01/2003 ಮತ್ತು 220/2003 ಕಲಂ 78(3) ಕೆ.ಪಿ.ಆಕ್ಟ್ ರೀತ್ಯಾ ಮೊಕದ್ದಮೆಗಳನ್ನು ದಾಖಲಿಸಿದ್ದಾಗಿ ಈ ಕುರಿತು ಮಟ್ಕಾ ದಂಧೆ ನಡೆಸುತ್ತಿದ್ದ ಶಿವು ಆಲಿಯಾಸ್ ಶಿವಣ್ಣ ಎಂಬುವರು ಈಗಲೂ ಮಟ್ಕಾ, ಜೂಜಾಟ ನಡೆಸುತ್ತಿದ್ದು, ಈ ಬಗ್ಗೆ ದಿನಾಂಕ : 13–12–2003 ರಲ್ಲಿ ನಿಮಗೆ ಲಿಖಿತವಾಗಿ ಸೂಚನೆ ನೀಡಿದ್ದರೂ ಸಹ ನೀವು ಯಾವುದೇ ಕ್ರಮ ಜರುಗಿಸಿಲ್ಲವೆಂದೂ ಇದರಿಂದಾಗಿ ದಿನಾಂಕ : 27–12–2003 ರಂದು ಡಿ.ಎಸ್.ಪಿ. ನಗರ ಉಪವಿಭಾಗ ರವರೇ ಸ್ವತಃ ಧಾಳಿ ಮಾಡಿ ರೂ. 4,72,591–00 ಹಣ ಬರೆದ ಮಟ್ಕಾ ಚೀಟಿಯೊಂದಿಗೆ ಬಾಬ್ತು ಮತ್ತು ಇತರರನ್ನು ಬಂಧಿಸಿ ರೂ. 12,555–00 ನಗದು ಹಣವನ್ನು ಅಮಾನತ್ತುಪಡಿಸಿಕೊಂಡಿದ್ದಾಗಿ, ಶಿವು ಎಂಬಾತನು ಹಣದೊಂದಿಗೆ ಪರಾರಿ ಆಗಿದ್ದಾಗಿ, ಇದರಿಂದಾಗಿ ನೀವು ನಿಮ್ಮ ಠಾಣಾ ವ್ಯಾಪ್ತಿಯಲ್ಲಿ ಮಟ್ಕಾ ಜೂಜಾಟಕ್ಕೆ ಪ್ರೋತ್ಸಾಹ ನೀಡುತ್ತಿರುವುದಾಗಿ ಆರೋಪಣೆ ಇರುತ್ತದೆ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣೆ ಪತ್ರ ಹೊರಡಿಸಿ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಇವರು ಮೇಲೆ ಕ್ರಮ ಸಂಖ್ಯೆ : 1) ರಲ್ಲಿ ಓದಲಾದ ದಿನಾಂಕ : 29–7–2004 ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ 4 ತಿಂಗಳ ಕಾಲ ಮುಂದೂಡಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಾವಣಗೆರೆ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂಥಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ : 7–3–2005 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣಾ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ಮೇಲಿನ ಆರೋಪವು ಸಾಬೀತಾಗಿರುವುದರಿಂದ ಹಾಗೂ ಠಾಣಾ ವ್ಯಾಪ್ತಿಯಲ್ಲಿ ಸ್ವಲ್ಪ ಮಟ್ಟಿಗಾದರೂ ನಿಯಂತ್ರಣದಲ್ಲಿಟ್ಟುಕೊಳ್ಳಬೇಕಾಗುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು ಸಾಕ್ಷಿ ಆಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒ.ಇ/73/ಪೊಸಿಅ/2006, ಬೆಂಗಳೂರು, ದಿ: 03ನೇ ಜುಲೈ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಶಾಮೀದ್ ಬಾಷಾ, ಪಿ.ಎಸ್.ಐ., ಬಸವನಗರ ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 1485

**ವಿಷಯ:** ಶ್ರೀ.ಎಂ.ಎಸ್.ಉಮೇಶ್, ಪಿ.ಎಸ್.ಐ., ತಿಪಟೂರು ಗ್ರಾಮಾಂತರ ಪೊಲೀಸ್ ಠಾಣೆ, ತುಮಕೂರು ಜಿಲ್ಲೆರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಇವರ ಆದೇಶ ಸಂಖ್ಯೆ : ಪನ್ಸಿ/75/2005–06, ದಿನಾಂಕ : 2–5–2006.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ : ಅಪೀಲು/18/2006–07, ದಿ: 17–10–2006.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 10–1–2006.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು/2/149/2006–07, ದಿನಾಂಕ : 5–5–2007.

**ಪ್ರಸ್ತಾವನೆ:**

ಶ್ರೀ.ಎಂ.ಎಸ್.ಉಮೇಶ್, ಪಿ.ಎಸ್.ಐ., ತಿಪಟೂರು ಗ್ರಾಮಾಂತರ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ ಇವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7 ರಡಿ ದೋಷಾರೋಪಣಾ ಪತ್ರ ಹೊರಡಿಸಿದೆ.

**ದೋಷಾರೋಪಣೆ:**

ದಿನಾಂಕ: 9–12–2005 ರಂದು ಸಂಜೆ 7–00 ಗಂಟೆ ಸಮಯದಲ್ಲಿ ತಿಪಟೂರು ತಾಲ್ಲೂಕು ಕಿಬ್ಬನಹಳ್ಳಿ ಕ್ರಾಸ್ ಬಳಿ ಕಟಗೇನಹಳ್ಳಿ ರಸ್ತೆಯಲ್ಲಿರುವ ಪರಶಿವಮೂರ್ತಿ ಎಂಬುವರಿಗೆ ಸೇರಿದ ರವೀಶ್ ತಂದೆ ಹಾಲಪ್ಪ ಎಂಬುವರು ಬಾಡಿಗೆಗೆ ಪಡೆದಿದ್ದ ಈ ಮನೆಯಲ್ಲಿ ಜೂಜಾಟ ನಡೆಯುತ್ತಿದ್ದ ಜೂಜಾಟ ಕೇಂದ್ರದ ಮೇಲೆ ದಾಳಿ ನಡೆಸಿ, 30 ಜನರನ್ನು ಬಂಧಿಸಿ, ಪಣವಾಗಿಟ್ಟಿದ್ದ ರೂ. 68,925–00 ಗಳ ಹಣವನ್ನು ಅಮಾನತ್ತುಪಡಿಸಿಕೊಂಡು, ಸದರಿ ಜೂಜಾಟಕ್ಕೆ ಉಪಯೋಗಿಸಿದ ವಸ್ತುಗಳನ್ನು ಪೊಲೀಸ್ ವಶಕ್ಕೆ ತೆಗೆದುಕೊಳ್ಳಲಾಗಿದ್ದು, ಸದರಿ ಸ್ಥಳದಲ್ಲಿ ತುಂಬಾ ದಿವಸದಿಂದ ಅವಿರತವಾಗಿ ಜೂಜಾಟ ನಡೆಯುತ್ತಿದ್ದರೂ ಸಹ ಅದನ್ನು ತಡೆಗಟ್ಟಲು ಕ್ರಮ ಕೈಗೊಳ್ಳದೇ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆಯನ್ನು ತೋರಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಿ ಆರೋಪ ಸಾಭೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಇವರು ಮೇಲೆ ಕ್ರಮ ಸಂಖ್ಯೆ : 1) ರಲ್ಲಿ ಓದಲಾದ ದಿನಾಂಕ : 2–5–2006 ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂಥಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ : 17–10–2006 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣಾ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಯನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಮ್ಮ ಠಾಣಾ ವ್ಯಾಪ್ತಿಯಲ್ಲಿ ದೊಡ್ಡ ಪ್ರಮಾಣದ ಜೂಜಾಟ ನಡೆಯುತ್ತಿದ್ದರೂ ಅದನ್ನು ತಪ್ಪಿಸಲು ವಿಫಲವಾಗಿರುವುದು ಸಾಬೀತಾಗಿರುತ್ತದೆ. ಅದನ್ನು ತಡೆಗಟ್ಟಲು ಯಾವುದೇ ಕ್ರಮಕೈಗೊಳ್ಳದೇ ಕರ್ತವ್ಯದಲ್ಲಿ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಸಾಕ್ಷಿಯಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒ.ಇ/136/ಪೊಸಿಅ/2007, ಬೆಂಗಳೂರು, ದಿ: 25ನೇ ಜುಲೈ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಎಂ.ಎಸ್.ಉಮೇಶ್, ಪಿ.ಎಸ್.ಐ., ತಿಪಟೂರು ಗ್ರಾಮಾಂತರ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1486

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 117 ಪಅವಿ 2007, ಬೆಂಗಳೂರು, ದಿನಾಂಕ: 2ನೇ ಆಗಸ್ಟ್ 2007**

**ವಿಷಯ:** ಕರ್ನಾಟಕ ಪಶುವೈದ್ಯಕೀಯ ಪರೀಕ್ಷಕರ ಸಂಘಕ್ಕೆ ನೀಡಿರುವ ನಿವೇಶನವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಎಹೆಚ್‌ಎಫ್‌ಎಫ್/27/ವಿಎಲ್‌ಎಸ್/93, ದಿನಾಂಕ:27.04.1994.
2) ಪ್ರಧಾನ ಕಾರ್ಯದರ್ಶಿ, ಕರ್ನಾಟಕ ಪಶುವೈದ್ಯಕೀಯ ಪರೀಕ್ಷಕರ ಸಂಘ, ಬೆಂಗಳೂರು, ಇವರ ಮನವಿ ದಿನಾಂಕ: 22.05.2007.
3) ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರ ಪ್ರಸ್ತಾವನೆ ಸಂಖ್ಯೆ:ಆಪಸಂ/ಡಿವಿಡಿ-3/ವಿವ-37/ಕೆ.ವಿ.ಎಲ್.ಐ.ಎ/07-08, ದಿನಾಂಕ:04.02.2007 ಹಾಗೂ ದಿನಾಂಕ: 31.07.2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ವೈದ್ಯಕೀಯ ಪರೀಕ್ಷಕರ ಸಂಘಕ್ಕೆ ನಗರ ಪಶುವೈದ್ಯ ಆಸ್ಪತ್ರೆ, ಮೈಸೂರು ರಸ್ತೆ, ಬೆಂಗಳೂರು, ಇದರ ಆವರಣದಲ್ಲಿ ಉತ್ತರ-ಪಶ್ಚಿಮ ದಿಕ್ಕಿಗೆ (ವಾಯುವ್ಯ) ಸೇರಿದಂತೆ ಆಸ್ಪತ್ರೆ ಹಿಂಭಾಗದಲ್ಲಿ ಪೂರ್ವ-ಪಶ್ಚಿಮ:40 ಅಡಿಗಳು ಮತ್ತು ಉತ್ತರ-ದಕ್ಷಿಣ:30 ಅಡಿಗಳನ್ನು ನೀಡಿ ಆದೇಶಿಸಲಾಗಿದೆ.

ಸಂಘದ ಪ್ರಧಾನ ಕಾರ್ಯದರ್ಶಿಯವರು ಸಲ್ಲಿಸಿರುವ ಮನವಿಯಲ್ಲಿ 1994ರಲ್ಲಿ ಸಂಘಕ್ಕೆ ನಿವೇಶನ ಮಂಜೂರು ಮಾಡಿದಾಗ ವೃಂದದ ನೌಕರರ ಸಂಖ್ಯೆ ತುಂಬಾ ಕಡಿಮೆ ಇದ್ದು, ಈ ಅವಧಿಯಲ್ಲಿ ವೃಂದದ ನೌಕರರ ಸಂಖ್ಯೆ ತುಂಬಾ ಹೆಚ್ಚಾಗಿರುವ ಕಾರಣದಿಂದಾಗಿ ಹಾಗೂ ಸದಸ್ಯರ ಹಿತದೃಷ್ಟಿಯಿಂದ ಹಲವಾರು ಯೋಜನೆಗಳನ್ನು ಹಮ್ಮಿಕ್ಕೊಂಡಿದ್ದು, ಸಂಘದ ಚಟುವಟಿಕೆಗಳು ವಿಸ್ತಾರಗೊಂಡಿರುವುದರಿಂದ ಹಾಲಿ ನೀಡಿರುವ ನಿವೇಶನವನ್ನು 40 x 30 ಅಡಿಗಳಿಂದ 100 x 40 ಅಡಿಗಳಿಗೆ ವಿಸ್ತರಿಸಿ ಕೊಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (3)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರು ಕರ್ನಾಟಕ ಪಶುವೈದ್ಯಕೀಯ ಪರೀಕ್ಷಕರ ಸಂಘ (ರಿ), ಬೆಂಗಳೂರು, ಇವರಿಗೆ ಹಾಲಿ ನೀಡಿರುವ 40 x 30 ಅಳತೆಯ ನಿವೇಶನವನ್ನು ಪೂರ್ವ-ಪಶ್ಚಿಮ: 100 ಅಡಿ, ಉತ್ತರ-ದಕ್ಷಿಣ:40 ಅಡಿಗೆ ವಿಸ್ತರಿಸಿ ಸರ್ಕಾರದ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ.

**ಆದೇಶ**

ಮೇಲ್ಕಂಡ ವಿವರಣೆಗಳ ಹಿನ್ನೆಲೆಯಲ್ಲಿ ಹಾಗೂ ಆಯುಕರು ಶಿಫಾರಸ್ಸು ಮಾಡಿರುವಂತೆ ಕರ್ನಾಟಕ ಪಶುವೈದ್ಯಕೀಯ ಪರೀಕ್ಷಕರ ಸಂಘಕ್ಕೆ ಈಗಾಗಲೇ ಮಂಜೂರು ಮಾಡಿರುವ 40 x 30 ಅಡಿ ಅಳತೆಯ ನಿವೇಶನವನ್ನು ಒಳಗೊಂಡಂತೆ ಪೂರ್ವ-ಪಶ್ಚಿಮ:100 ಅಡಿ, ಉತ್ತರ - ದಕ್ಷಿಣ:40 ಅಡಿಗಳಿಗೆ ವಿಸ್ತರಿಸಿ ಸರ್ಕಾರದ ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ನಾಗರಾಜ**

ಪಿ.ಆರ್. 1464

ಪೀಠಾಧಿಕಾರಿ-2,

ಪಸುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, (ಪಶುಸಂಗೋಪನೆ-ಎ)

## ಕಾರ್ಮಿಕ ಸಚಿವಾಲಯ

**ವಿಷಯ:** ಪೂರ್ವಾನ್ವಯ ಮುಂಬಡ್ತಿ - ಶ್ರೀ ಹೆಚ್.ವಿ. ವೆಂಕಟರಾಮು, ಉಪನಿರ್ದೇಶಕರು/ಪ್ರಾಂಶುಪಾಲರು ದರ್ಜೆ-1.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 221 ಇಟಿಐ 98 ದಿನಾಂಕ: 03/10/1998.
2) ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 221 ಇಟಿಐ 98 ದಿನಾಂಕ: 01/03/2001.
3) ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 185 ಇಟಿಐ 1999 ದಿನಾಂಕ: 24/08/2006.
4) ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 191 ಇಟಿಐ 2006 ದಿನಾಂಕ: 06/12/2006.

5) ಸರ್ಕಾರದ ಪತ್ರ ಸಂಖ್ಯೆ: ಕಾಇ 291 ಇಟಿಐ 2006 ದಿನಾಂಕ: 11/12/2006.

6) ಪತ್ರ ಸಂಖ್ಯೆ: ಪಿಎಸ್‌ಸಿ 168 ಸಿಎನ್‌ಎಸ್ 06 ದಿನಾಂಕ: 16/07/2007

**ಪ್ರಸ್ತಾವನೆ:**

ಉದ್ಯೋಗ ಮತ್ತು ತರಬೇತಿ ಇಲಾಖೆಯ ತರಬೇತಿ ವಿಭಾಗದ ಉಪನಿರ್ದೇಶಕರು/ ಪ್ರಾಂಶುಪಾಲರು ದರ್ಜೆ-1 ವೃಂದದ ಹುದ್ದೆಗಳನ್ನು ತುಂಬಲು ಅಧಿಕಾರಿಗಳ ಸೂಕ್ತತೆಯನ್ನು ಪರಿಗಣಿಸಿ ದಿನಾಂಕ: 29.10.1998 ರಂದು ಜರುಗಿದ ಸಭೆಯಲ್ಲಿ ಇಲಾಖಾ ಪದೋನ್ನತ ಸಮಿತಿಯು ಶ್ರೀ ಹೆಚ್.ವಿ. ವೆಂಕಟರಾಮು, ಸಹಾಯಕ ನಿರ್ದೇಶಕರು/ ಪ್ರಾಂಶುಪಾಲರು ದರ್ಜೆ-2 ರವರನ್ನು ವಿಚಾರಣೆ ಬಾಕಿ ಇಟ್ಟು ಅಮಾನತ್ತನ್ನು ರದ್ದುಗೊಳಿಸಿರುವುದರಿಂದ ಅವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರುವ ಕಾರಣ ಉಪನಿರ್ದೇಶಕರು / ಪ್ರಾಂಶುಪಾಲರು ದರ್ಜೆ-1 ಹುದ್ದೆಗೆ ಅರ್ಹತೆ ಹೊಂದಿಲ್ಲವೆಂದು ಶಿಫಾರಸ್ಸು ಮಾಡಿತ್ತು. ಪ್ರಕಾರ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಜೇಷ್ಠತೆಯಲ್ಲಿ ಅವರಿಗಿಂತ ಕಿರಿಯರಾದ ಶ್ರೀ ಕೆ. ರಾಮಚಂದ್ರಪ್ಪ, ಸಹಾಯಕ ನಿರ್ದೇಶಕರು/ ಪ್ರಾಂಶುಪಾಲರು ದರ್ಜೆ-2 ಮತ್ತಿತರರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ-32ರಡಿ ಉಪನಿರ್ದೇಶಕರು/ಪ್ರಾಂಶುಪಾಲರು ದರ್ಜೆ-1 ಹುದ್ದೆಯ ಸ್ವತಂತ್ರಪ್ರಭಾರದಲ್ಲಿಡಲಾಗಿತ್ತು. ಶ್ರೀ ಹೆಚ್.ವಿ. ವೆಂಕಟರಾಮು, ಸಹಾಯಕ ನಿರ್ದೇಶಕರು/ಪ್ರಾಂಶುಪಾಲರು ದರ್ಜೆ-2 ರವರ 1997-98 ಸಾಲಿನ ಕಾರ್ಯನಿರ್ವಹಣಾ ವರದಿಯಲ್ಲಿ ಪ್ರತಿಕೂಲ ಷರಾವಿದ್ದುದರಿಂದ ಸಹ ಮುಂಬಡ್ತಿ ನೀಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಕೆ. ರಾಮಚಂದ್ರಪ್ಪ ಮತ್ತಿತರ ಸಹಾಯಕ ನಿರ್ದೇಶಕರು /ಪ್ರಾಂಶುಪಾಲರು ದರ್ಜೆ-2 ರವರಿಗೆ ಅವರನ್ನು ನಿಯಮ-32ರಡಿ ಸ್ವತಂತ್ರಪ್ರಭಾರಲ್ಲಿಟ್ಟು ದಿನಾಂಕದಿಂದಲೇ ಜಾರಿಗೆ ಬರುವಂತೆ ಉಪನಿರ್ದೇಶಕರು/ಪ್ರಾಂಶುಪಾಲರು ದರ್ಜೆ-1 ವೃಂದಕ್ಕೆ ಪೂರ್ವಾನ್ವಯ ಮುಂಬಡ್ತಿ ನೀಡಲಾಗಿತ್ತು.

ಶ್ರೀ ಹೆಚ್.ವಿ. ವೆಂಕಟರಾಮು, ಸಹಾಯಕ ನಿರ್ದೇಶಕರು / ಪ್ರಾಂಶುಪಾಲರು ದರ್ಜೆ-2 ರವರು ಸಲ್ಲಿಸಿದ್ದ ಅರ್ಜಿ ಸಂಖ್ಯೆ: 4488/2005ರ ಮೇಲಿನ ದಿನಾಂಕ:17.04.2006ರ ತೀರ್ಪಿನಲ್ಲಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಉಪನಿರ್ದೇಶಕರು ವೃಂದಕ್ಕೆ ಮುಂಬಡ್ತಿ ನೀಡಬೇಕೆಂಬ ಅರ್ಜಿದಾರರ ಮನವಿಯನ್ನು ನಾಲ್ಕು ತಿಂಗಳೊಳಗಾಗಿ ಪರಿಗಣಿಸಿ ಸೂಕ್ತ ಆದೇಶವನ್ನು ಹೊರಡಿಸುವಂತೆ ತೀರ್ಪು ಇತ್ತಿತ್ತು.

ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಹೆಚ್.ವಿ. ವೆಂಕಟರಾಮು, ಸಹಾಯಕ ನಿರ್ದೇಶಕರು / ಪ್ರಾಂಶುಪಾಲರು ದರ್ಜೆ-2 ರವರ 1997-98ನೇ ಸಾಲಿನ ಕಾರ್ಯನಿರ್ವಹಣಾ ವರದಿಯಲ್ಲಿ ಪ್ರತಿಕೂಲ ಷರಾವನ್ನು ತೊಡೆದುಹಾಕಲಾಗಿತ್ತು.

ದಿನಾಂಕ: 29.11.2006 ರಂದು ಜರುಗಿದ ತನ್ನ ಸಭೆಯಲ್ಲಿ ಇಲಾಖಾ ಪದೋನ್ನತ ಸಮಿತಿಯು ಸಹಾಯಕ ನಿರ್ದೇಶಕರು / ಪ್ರಾಂಶುಪಾಲರು ದರ್ಜೆ-2 ರವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಕೆ. ರಾಮಚಂದ್ರಪ್ಪ, ಸಹಾಯಕ ನಿರ್ದೇಶಕರು /ಪ್ರಾಂಶುಪಾಲರು ದರ್ಜೆ-2 ರವರಿಗೆ ಉಪನಿರ್ದೇಶಕರಾಗಿ ಮುಂಬಡ್ತಿ ನೀಡಿದ ದಿನಾಂಕ: 13.11.1998 ರಂದು ಜೇಷ್ಠತೆಯಲ್ಲಿ ಹಿರಿಯರಾದ ಶ್ರೀ ಹೆಚ್.ವಿ. ವೆಂಕಟರಾಮು, ಸಹಾಯಕ ನಿರ್ದೇಶಕರು /ಪ್ರಾಂಶುಪಾಲರು ದರ್ಜೆ-2 ರವರ ವಿರುದ್ಧ ದೋಷಾರೋಪಣ ಪಟ್ಟಿ / ಚಾರ್ಜ್ ಶೀಟ್ ಹೊರಡಿಸದಿರುವುದರಿಂದ ದಿನಾಂಕ: 13.11.1998 ರಿಂದ ಜಾರಿಗೆ ಬರುವಂತೆ ಉಪನಿರ್ದೇಶಕರ ಹುದ್ದೆಗೆ ಮುಂಬಡ್ತಿ ನೀಡಲು ಸೂಕ್ತವೆಂದು ಶಿಫಾರಸ್ಸು ಮಾಡಿತ್ತು.

ಮೇಲೆ (4)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಶ್ರೀ ಹೆಚ್.ವಿ. ವೆಂಕಟರಾಮು, ಸಹಾಯಕ ನಿರ್ದೇಶಕರು (ತರಬೇತಿ)/ ಪ್ರಾಂಶುಪಾಲರು ದರ್ಜೆ-2 ರವರನ್ನು ಉಪನಿರ್ದೇಶಕರು/ಪ್ರಾಂಶುಪಾಲರು ದರ್ಜೆ-1 ವೃಂದಕ್ಕೆ ಸ್ಥಾನಪನ್ನ ಮುಂಬಡ್ತಿ ನೀಡಲಾಗಿದೆ.

ಮೇಲೆ (5)ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ಶ್ರೀ ಹೆಚ್.ವಿ. ವೆಂಕಟರಾಮು, ಸಹಾಯಕ ನಿರ್ದೇಶಕರು (ತರಬೇತಿ)/ ಪ್ರಾಂಶುಪಾಲರು ದರ್ಜೆ-2 ರವರಿಗೆ ದಿನಾಂಕ: 13.11.1998 ರಿಂದ ಜಾರಿಗೆ ಬರುವಂತೆ ಉಪನಿರ್ದೇಶಕರು/ಪ್ರಾಂಶುಪಾಲರು ದರ್ಜೆ-1 ವೃಂದಕ್ಕೆ ಮುಂಬಡ್ತಿ ನೀಡುವ ಸಹಮತಿಯನ್ನು ನೀಡುವಂತೆ ಕರ್ನಾಟಕ ಲೋಕಸೇವಾ ಆಯೋಗವನ್ನು ಕೋರಲಾಗಿತ್ತು.

ಕರ್ನಾಟಕ ಲೋಕಸೇವಾ ಆಯೋಗವು ಮೇಲೆ (6)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಶ್ರೀ ಹೆಚ್.ವಿ. ವೆಂಕಟರಾಮು, ಸಹಾಯಕ ನಿರ್ದೇಶಕರು (ತರಬೇತಿ)/ ಪ್ರಾಂಶುಪಾಲರು ದರ್ಜೆ-2 ರವರಿಗೆ ದಿನಾಂಕ:13.11.1998 ರಿಂದ ಜಾರಿಗೆ ಬರುವಂತೆ ಉಪನಿರ್ದೇಶಕರು/ಪ್ರಾಂಶುಪಾಲರು ದರ್ಜೆ-1 ವೃಂದಕ್ಕೆ ಮುಂಬಡ್ತಿ ನೀಡಲು ಸಹಮತಿಯನ್ನು ನೀಡಿರುತ್ತದೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ಶ್ರೀ ಹೆಚ್.ವಿ. ವೆಂಕಟರಾಮು, ಉಪನಿರ್ದೇಶಕರು (ತರಬೇತಿ)/ ಪ್ರಾಂಶುಪಾಲರು ದರ್ಜೆ-1 ರವರಿಗೆ ಜೇಷ್ಠತೆಯಲ್ಲಿ ಅವರಿಗಿಂತ ಕಿರಿಯರಾದ ಶ್ರೀ ಕೆ. ರಾಮಚಂದ್ರಪ್ಪ, ರವರಿಗೆ ಉಪನಿರ್ದೇಶಕರು/ಪ್ರಾಂಶುಪಾಲರು ದರ್ಜೆ-1 ವೃಂದಕ್ಕೆ ಮುಂಬಡ್ತಿ ನೀಡಿದ ದಿನಾಂಕ:13.11.1998 ರಿಂದ ಜಾರಿಗೆ ಬರುವಂತೆ ಪೂರ್ವಾನ್ವಯ ಮುಂಬಡ್ತಿ ನೀಡಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 291 ಇಟಿಐ 2006, ಬೆಂಗಳೂರು, ದಿನಾಂಕ: 31ನೇ ಜುಲೈ 2007**

ಕರ್ನಾಟಕ ನಾಗರೀಕ ಸೇವಾ (ಆರ್‌ಪಿಪಿ) ನಿಯಮಗಳ ನಿಯಮ 2(1)(ಡಿ) ಪ್ರಕಾರ ಶ್ರೀ ಹೆಚ್.ವಿ. ವೆಂಕಟರಾಮು, ಉಪನಿರ್ದೇಶಕರು (ತರಬೇತಿ)/ ಪ್ರಾಂಶುಪಾಲರು ದರ್ಜೆ-1 ರವರಿಗೆ ಜೇಷ್ಠತೆಯಲ್ಲಿ ಅವರಿಗಿಂತ ಕಿರಿಯರಾದ ಶ್ರೀ ಕೆ. ರಾಮಚಂದ್ರಪ್ಪ ರವರಿಗೆ ಮುಂಬಡ್ತಿ ನೀಡಿದ ದಿನಾಂಕ: 13.11.1998 ರಿಂದ ಜಾರಿಗೆ ಬರುವಂತೆ ರೂ.9580-14200 ರ ವೇತನ ಶ್ರೇಣಿಯ ಉಪನಿರ್ದೇಶಕರು (ತರಬೇತಿ) /ಪ್ರಾಂಶುಪಾಲರು ದರ್ಜೆ-1 ವೃಂದಕ್ಕೆ ಪೂರ್ವಾನ್ವಯ ಮುಂಬಡ್ತಿ ನೀಡಲಾಗಿದೆ.

ಶ್ರೀ ಹೆಚ್.ವಿ. ವೆಂಕಟರಾಮು, ಉಪನಿರ್ದೇಶಕರು (ತರಬೇತಿ)/ ಪ್ರಾಂಶುಪಾಲರು ದರ್ಜೆ-1 ರವರ ಹೆಸರನ್ನು ಉಪನಿರ್ದೇಶಕರು (ತರಬೇತಿ)/ ಪ್ರಾಂಶುಪಾಲರು ದರ್ಜೆ-1 ವೃಂದದ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ನೂರುದ್ದೀನ್ ಮತ್ತು ಶ್ರೀ ಕೆ. ರಾಮಚಂದ್ರಪ್ಪ ರವರ ಹೆಸರುಗಳ ನಡುವೆ ಇಟ್ಟು ಪ್ರತಿಷ್ಠಾಪಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀರಾಮರೆಡ್ಡಿ**

ಪಿ.ಆರ್. 1465

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ. (ಉದ್ಯೋಗ ಮತ್ತು ತರಬೇತಿ)

ಇಂಧನ ಸಚಿವಾಲಯ

**ವಿಷಯ:** ಮೆ:: ಸೈಯದ್ ಇಬ್ರಾಹಿಂ ಅಂಡ್ ಸನ್ಸ್ ಕಂಪನಿಯವರಿಗೆ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಸುಲುಗೋಡು ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಂಇ 50 ಎನ್‌ಸಿಇ 2004 ದಿನಾಂಕ: 27.2.2004.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಸುಲುಗೋಡು/2006/2100 ದಿನಾಂಕ: 23.9.2006.

**ಪ್ರಸ್ತಾವನೆ :–**

ಓದಲಾದ (1)ರ ಆದೇಶದಲ್ಲಿ ಮೆ:: ಸೈಯದ್ ಇಬ್ರಾಹಿಂ ಅಂಡ್ ಸನ್ಸ್ ಕಂಪನಿಯವರಿಗೆ ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕಿನ ಸುಲುಗೋಡು ಗ್ರಾಮದ ಬಳಿ ಅಮ್ಮಗುಡ್ಡ ಹೊಳೆಗೆ ಅಡ್ಡಲಾಗಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಸುಲುಗೋಡು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: ಸೈಯದ್ ಇಬ್ರಾಹಿಂ ಅಂಡ್ ಸನ್ಸ್ ಕಂಪನಿಗೆ ಯೋಜನೆಯ ಅನುಷ್ಠಾನಕ್ಕಾಗಿ ಸ್ಥಳೀಯರಿಂದ ವಿರೋಧ ಇದುದರಿಂದ ಹಾಗೂ ಸ್ಥಳ ಪರಿವೀಕ್ಷಣೆ ನಡೆಸಲು ಅರಣ್ಯ ಇಲಖೆಯಿಂದ ಅನುಮತಿ ದೊರಕದಿರುವುದರಿಂದ ಯೋಜನೆಯ ಅನುಷ್ಠಾನ ವಿಳಂಬವಾಗಿದೆ ಎಂದು ತಿಳಿಸಿ ಈ ಯೋಜನೆಗೆ ಕಾಲಾವಕಾಶವನ್ನು ಜೂನ್ 2008 ರವರೆಗೆ ವಿಸ್ತರಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 325 ಎನ್‌ಸಿಇ 2004, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2007.**

ಸರ್ಕಾರವು ಮೆ:: ಸೈಯದ್ ಇಬ್ರಾಹಿಂ ಅಂಡ್ ಸನ್ಸ್ ಕಂಪನಿಯವರಿಗೆ ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕಿನ ಸುಲುಗೋಡು ಗ್ರಾಮದ ಬಳಿ ಅಮ್ಮಗುಡ್ಡ ಹೊಳೆಗೆ ಅಡ್ಡಲಾಗಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಸುಲುಗೋಡು ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ: 30.6.2008 ರವರೆಗೆ ವಿಸ್ತರಿಸಲಾಗಿದೆ.

ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್.ಬಿ.ಕೃಷ್ಣಪ್ಪನವರ್**

ಪಿ.ಆರ್. 1376

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ಉನ್ನತ ಶಿಕ್ಷಣ ಸಚಿವಾಲಯ**

**ತಿದ್ದುಪಡಿ**

**ಕ್ರಮಾಂಕ: ಇಡಿ 117 ಯುಡಿವಿ 2007, ಬೆಂಗಳೂರು, ದಿನಾಂಕ: 10ನೇ ಜುಲೈ 2007.**

ಸಂಖ್ಯೆ:ಇಡಿ 117 ಯುಡಿವಿ 2007, ದಿನಾಂಕ:2.7.2007ರ ಸರ್ಕಾರಿ ಆದೇಶದಲ್ಲಿ ಎಲ್ಲೆಲ್ಲಿ 2007-08ನೇ ಸಾಲಿನಿಂದ ಎಂದು ನಮೂದಾಗಿರುತ್ತದೋ ಅಲ್ಲಿ 2006-07ನೇ ಸಾಲಿನಿಂದ ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಬಿ. ಉಳವಿ**

ಪಿ.ಆರ್. 1383

ಸರ್ಕಾರದ ಅಧೀನ ಕಾರ್ಯದರ್ಶಿ,

ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

**ಕಂದಾಯ ಸಚಿವಾಲಯ**

**ವಿಷಯ:** ಇಲಾಖೆಯ ಬರ ಉಸ್ತುವಾರಿ ಕೋಶವನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 382 ಟಿಎನ್‌ಆರ್ 2002, ದಿನಾಂಕ: 3.1.2003.
2. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 369 ಟಿಎನ್‌ಆರ್ 2003, ದಿನಾಂಕ: 24.6.2003.
3. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 369 ಟಿಎನ್‌ಆರ್ 2003, ದಿನಾಂಕ: 10.11.2003.
4. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 369 ಟಿಎನ್‌ಆರ್ 2003, ದಿನಾಂಕ: 17.7.2004.
5. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 608 ಟಿಎನ್‌ಆರ್ 2004, ದಿನಾಂಕ: 22.12.2004.
6. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 608 ಟಿಎನ್‌ಆರ್ 2004, ದಿನಾಂಕ: 28.12.2005.
7. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 286 ಟಿಎನ್‌ಆರ್ 2006, ದಿನಾಂಕ: 13.7.2006.
8. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಸಸಿವಿ 06 ದಿನಾಂಕ: 19.9.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ನೇತೃತ್ವದಲ್ಲಿ ಪ್ರತಿಯೊಂದು ಕಂದಾಯ ವಿಭಾಗದಲ್ಲಿನ ಬರ ಪರಿಸ್ಥಿತಿಯನ್ನು ಅವಲೋಕಿಸಲು ಬರ ಉಸ್ತುವಾರಿ ಕೋಶವನ್ನು ದಿನಾಂಕ: 1.12.2002 ರಿಂದ 30.6.2003 ರವರೆಗೆ ಸೃಜಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ:24.6.2003ರ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಮಾತ್ರ ಪೂರಕ ಸಿಬ್ಬಂದಿ ಸಹಿತ ದಿನಾಂಕ: 1.7.2003 ರಿಂದ 31.12.2003ರ ವರೆಗೆ ಮುಂದುವರಿಸಲು ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ದಿನಾಂಕ: 10.11.2003ರ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಮಾತ್ರ ಪೂರಕ ಸಿಬ್ಬಂದಿ ಸಹಿತ ದಿನಾಂಕ: 1.1.2004 ರಿಂದ 30.06.2004ರವರೆಗೆ ಮುಂದುವರಿಸಲು ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ (4)ರಲ್ಲಿ ಓದಲಾದ ದಿನಾಂಕ: 17.7.2004ರ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಮಾತ್ರ ಪೂರಕ ಸಿಬ್ಬಂದಿ ದಿನಾಂಕ: 1.7.2004 ರಿಂದ 31.12.2004ರವರೆಗೆ ಮುಂದುವರಿಸಲು ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ (5)ರಲ್ಲಿ ಓದಲಾದ ದಿನಾಂಕ: 22.12.2004ರ ಸರ್ಕಾರದ ಆದೇಶದಲ್ಲಿ ಸದರಿ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಮಾತ್ರ ಪೂರಕ ಸಿಬ್ಬಂದಿಯೊಂದಿಗೆ ಸಹಿತ ದಿನಾಂಕ: 1.1.2005 ರಿಂದ 30.06.2005ರವರೆಗೆ ಮುಂದುವರಿಸಲು ಮಂಜೂರಾತಿಯನ್ನು ನೀಡಲಾಗಿತ್ತು.

ಉಲ್ಲೇಖ(6)ರಲ್ಲಿ ಓದಲಾದ ದಿನಾಂಕ: 13.7.2006ರ ಆದೇಶದಲ್ಲಿ ಸದರಿ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಮಾತ್ರ ಪೂರಕ ಸಿಬ್ಬಂದಿಯೊಂದಿಗೆ ದಿನಾಂಕ:1.7.2006 ರಿಂದ 30.6.2007ರವರೆಗೆ ಮುಂದುವರಿಸಲಾಗಿತ್ತು.

ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 6 ಸಸಿನಿ 2006 ದಿನಾಂಕ: 19.9.2006ರಲ್ಲಿ ಬರ ಪರಿಹಾರ ಉಸ್ತುವಾರಿ ಕೋಶದ ವಿಶೇಷಾಧಿಕಾರಿ ಹುದ್ದೆಗೆ ಹೊಂದಿಕೊಂಡಂತೆ ಶೀಘ್ರಲಿಪಿಗಾರರ-1, ಕಿರಿಯ ಸಹಾಯಕರು-1 ಹಾಗೂ ದಲಾಯತ್-1 ಹುದ್ದೆಯನ್ನು ಸೃಜಿಸಲಾಗಿದೆ.

ರಾಜ್ಯದಲ್ಲಿ ಪ್ರಸ್ತುತ ಇರುವ ಪ್ರವಾಹ ಪರಿಸ್ಥಿತಿಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರವು ಈಗಾಗಲೇ ಬಿಡುಗಡೆ ಮಾಡಿರುವ ಆಹಾರಧಾನ್ಯಗಳ ಬಳಕೆ ಹಾಗೂ ಪರಿಹಾರಕ್ಕೆ ಸಂಬಂಧಿಸಿದಂತೆ ಇನ್ನಿತರ ಕೆಲಸ ಕಾರ್ಯಗಳನ್ನು ನಿರ್ವಹಿಸುವ ಸಲುವಾಗಿ ಈ ಬರ ಉಸ್ತುವಾರಿ ಕೋಶಕ್ಕೆ ವಿಶೇಷಾಧಿಕಾರಿ ಹುದ್ದೆಯನ್ನು ಮುಂದುವರಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 286 ಟಿಎನ್‌ಆರ್ 2007, ಬೆಂಗಳೂರು, ದಿನಾಂಕ: 30ನೇ ಜೂನ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕಂದಾಯ ಇಲಾಖೆಯ ಕಾರ್ಯದರ್ಶಿಯವರ ನೇರ ನೇತೃತ್ವದಲ್ಲಿರುವ ಬರ ಉಸ್ತುವಾರಿ ಕೋಶಕ್ಕೆ ಮಂಜೂರಾಗಿರುವ ವಿಶೇಷಾಧಿಕಾರಿ: ಉಪ ಕಾರ್ಯದರ್ಶಿ (ಬರ ಉಸ್ತುವಾರಿ ಕೋಶ) ಹುದ್ದೆಯನ್ನು ದಿ:1.7.2007 ರಿಂದ 30.6.2008ರವರೆಗೆ ಅಥವಾ ಮುಂದಿನ ಆದೇಶದವರೆಗೆ ಅವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಲಾಗಿದೆ.

2. ಈ ಆದೇಶವನ್ನು ಇಲಾಖಾ ಕಾರ್ಯದರ್ಶಿಗಳಿಗೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.96ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಪಿ.ಆರ್. 1384

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ ಮತ್ತು ಸೇವೆಗಳು-2)

**ತಿದ್ದೋಲೆ**

**ಸಂಖ್ಯೆ:ಕಂಇ 239 ಮುನೋಮು 2007, ಬೆಂಗಳೂರು, ದಿನಾಂಕ: 25ನೇ ಜುಲೈ 2007.**

ದಿನಾಂಕ:05.07.2007ರ ಸರ್ಕಾರದ ಆದೇಶ ಸಂ:ಕಂಇ 239 ಮುನೋಮು 2007ರ ಕ್ರ.ಸಂ.2ರಲ್ಲಿರುವ "ನೋಂದಣಿ ಉಪ ಮಹಾಪರಿವೀಕ್ಷಕರು (ಆಡಳಿತ ಮತ್ತು ಕಾನೂನು)" ಎಂಬ ಪದಗಳನ್ನು "ನೋಂದಣಿ ಉಪ ಮಹಾಪರಿವೀಕ್ಷಕರು (ಇಂಟಲಿಜೆನ್ಸ್)" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಫ್. ಯರಗೊಪ್ಪ**

ಪಿ.ಆರ್. 1385

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ತಿದ್ದುಪಡಿ/ಸೇರ್ಪಡೆ**

**ಸಂಖ್ಯೆ: ಅಪಜೀ 154 ಇಎನ್‌ವಿ 2006, ಬೆಂಗಳೂರು, ದಿನಾಂಕ: 20ನೇ ಜುಲೈ 2007**

**ವಿಷಯ:** ಜೀವವೈವಿಧ್ಯ ಕಾಯ್ದೆ 2002ರ ಪ್ರಕರಣ 37ರ ಅಡಿಯಲ್ಲಿ ಜೀವಿವೈವಿಧ್ಯ ಪಾರಂಪರಿಕ ತಾಣವನ್ನಾಗಿ (Biological Heritage Site) ಘೋಷಿಸುವ ಬಗ್ಗೆ.

**ಉಲ್ಲೇಖ:**
1. ಸರ್ಕಾರಿ ಆದೇಶ ಸಂಖ್ಯೆ:ಅಪಜೀ 154 ಇಎನ್‌ವಿ 2006, ಬೆಂಗಳೂರು, ದಿನಾಂಕ: 24.01.2007.
2. ಪತ್ರ ಸಂಖ್ಯೆ:ಕಜೀಮಂ/ಇತರೆ/19/ಪಾ.ತಾ/2006-07 ದಿನಾಂಕ:08.05.2007 ಸದಸ್ಯ ಕಾರ್ಯದರ್ಶಿ, ಕರ್ನಾಟಕ ಜೀವಿವೈವಿಧ್ಯ ಮಂಡಳಿ.

ದೊಡ್ಡಬಳ್ಳಾಪುರ ತಾಲ್ಲೂಕು, ನಲ್ಲೂರು ಗ್ರಾಮದ ಹುಣಸೆತೋಪನ್ನು ಜೀವವೈವಿಧ್ಯ ಕಾಯ್ದೆ 2002ರ ಪ್ರಕರಣ 37ರ ಅಡಿಯಲ್ಲಿ ಜೀವವೈವಿಧ್ಯ ಪಾರಂಪರಿಕ ತಾಣವನ್ನಾಗಿ (Biological Heritage Site) ಘೋಷಿಸಿ ಉಲ್ಲೇಖಿತ (1)ರ ಸರ್ಕಾರಿ ಆದೇಶವನ್ನು ಹೊರಡಿಸಲಾಗಿದೆ. ಸದರಿ ಸರ್ಕಾರಿ ಆದೇಶದ ವಿಷಯ, ಪ್ರಸ್ತಾವನೆ ಹಾಗೂ ಆದೇಶದ ಭಾಗಗಳಲ್ಲಿರುವ **"ದೊಡ್ಡಬಳ್ಳಾಪುರ ತಾಲ್ಲೂಕು ನಲ್ಲೂರು ಗ್ರಾಮದ 53.00 ಎಕರೆ ಪ್ರದೇಶದ ಹುಣಸೆತೋಪು"** ಎಂಬ ಪದಗಳ ಬದಲಾಗಿ **"ಬೆಂಗಳೂರು ಗ್ರಾಮಾಂತರ ಜಿಲ್ಲೆ ದೇವನಹಳ್ಳಿ ತಾಲ್ಲೂಕು ಚೆನ್ನರಾಯಪಟ್ಟಣ**

**ಹೋಬಳಿ ನಲ್ಲೂರು ಗ್ರಾಮದ ಸರ್ವೆ ನಂ.1ರ 53 ಎಕರೆ 2 ಗುಂಟೆ ಪ್ರದೇಶದ ಅಮರಾಯಿ ಹುಣಸೆತೋಪು"** ಎಂಬ ಪದಗಳನ್ನು ತಿದ್ದುಪಡಿ/ಸೇರ್ಪಡೆ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್.ಆರ್. ಜಗನ್ನಾಥ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿ.ಆರ್. 1386

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಹಾಸನ ನಗರಕ್ಕೆ ಮಂಜೂರಾಗಿರುವ ಪಶುವೈದ್ಯಕೀಯ ಕಾಲೇಜನ್ನು ತಾತ್ಕಾಲಿಕವಾಗಿ ರೇಷ್ಮೆ ತರಬೇತಿ ಸಂಸ್ಥೆಯಲ್ಲಿ ಪ್ರಾರಂಭಿಸುವ ಬಗ್ಗೆ.

**ಓದಲಾಗಿದೆ:**
1. ಕುಲಪತಿಗಳು, ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಿಗಳ ವಿಶ್ವವಿದ್ಯಾಲಯ, ಬೀದರ್ ಇವರ ಪತ್ರ ಸಂಖ್ಯೆ:ಕುಲಪತಿ/ಕಪಪಮೀವಿವಿ/ಪೈಕಾ/ಹಾಸನ/2007-08/476, ದಿನಾಂಕ: 8.5.2007.
2. ಆಯುಕ್ತರು, ಪಶುವೈದ್ಯ ಮತ್ತು ಪಶು ಸಂಗೋಪನೆ ಸೇವೆಗಳು ಇವರ ಪತ್ರ ಸಂಖ್ಯೆ:ಅಪಸಂ/ಡಿವಿಡಿ/ಪವೈಕಾ/ಹಾಸನ/ವಿವ/2007-08, ದಿನಾಂಕ: 16/17.5.2007.
3. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಪತ್ರ ಸಂಖ್ಯೆ:ತಾಂತರ/ಟಿ2/ಹಾಸನ/ತರಬೇತಿ ಸಂಸ್ಥೆ/8/07-08, ದಿನಾಂಕ:21.5.2007, 30.5.2007

**ಪ್ರಸ್ತಾವನೆ:**

ದಿನಾಂಕ: 5.4.2007 ರಂದು ಮಾನ್ಯ ಮುಖ್ಯಮಂತ್ರಿರವರ ಅಧ್ಯಕ್ಷತೆಯಲ್ಲಿ ಹಾಸನದಲ್ಲಿ ಪಶುವೈದ್ಯಕೀಯ ಕಾಲೇಜನ್ನು ಪ್ರಾರಂಭಿಸುವ ವಿಷಯಕ್ಕೆ ಕುರಿತಂತೆ ನಡೆದ ಸಭೆಯಲ್ಲಿ 2007-08ನೇ ಸಾಲಿನ ಶೈಕ್ಷಣಿಕ ವರ್ಷದಲ್ಲಿ ಮಹಾವಿದ್ಯಾಲಯವನ್ನು ಪ್ರಾರಂಭಿಸಲು ಮತ್ತು ತಾತ್ಕಾಲಿಕವಾಗಿ ರೇಷ್ಮೆ ಇಲಾಖೆಯ ಕಟ್ಟಡದಲ್ಲಿ ಕಾಲೇಜನ್ನು ಪ್ರಾರಂಭಿಸಲು ಅನುಮತಿ ನೀಡಿರುವುದರಿಂದ ಹಾಸನದ ರೇಷ್ಮೆ ತರಬೇತಿ ಸಂಸ್ಥೆಯಲ್ಲಿ 2 ರಿಂದ 3 ವರ್ಷಗಳ ವರೆಗೆ ಕಾಲೇಜನ್ನು ಪ್ರಾರಂಭಿಸಲು ಸ್ಥಳಾವಕಾಶ ನೀಡುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕುಲಪತಿಗಳು, ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಿಗಳ ಮಹಾವಿದ್ಯಾಲಯ, ನಂದಿನಗರ, ಬೀದರ್ ಇವರು ಸರ್ಕಾರವನ್ನು ಕೋರಿರುತ್ತಾರೆ. ಹಾಸನ ನಗರದಲ್ಲಿ ಪಶು ವೈದ್ಯಕೀಯ ವಿಶ್ವವಿದ್ಯಾನಿಲಯವನ್ನು 2007-08ನೇ ಶೈಕ್ಷಣಿಕ ವರ್ಷದಲ್ಲಿ ಪ್ರಾರಂಭಿಸುವ ಕುರಿತಂತೆ ದಿ:11.5.2007 ರಂದು ಮಾನ್ಯ ಮುಖ್ಯಮಂತ್ರಿರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಮಹಾ ವಿದ್ಯಾಲಯವನ್ನು ಪ್ರಸ್ತುತ ಶೈಕ್ಷಣಿಕ ವರ್ಷವಾದ 2007-08 ರಿಂದಲೇ ಪ್ರಾರಂಭಿಸಲು ಸರ್ಕಾರವು ಅನುಮೋದನೆ ನೀಡುವ ಹಿನ್ನೆಲೆಯಲ್ಲಿ ಹಾಸನ-ಅರಸೀಕೆರೆ ಮಾರ್ಗದಲ್ಲಿರುವ ರೇಷ್ಮೆ ತರಬೇತಿ ಕೇಂದ್ರದ ಕಟ್ಟಡಗಳನ್ನು ತಾತ್ಕಾಲಿಕವಾಗಿ ಪಶುವೈದ್ಯಕೀಯ ಮಹಾವಿದ್ಯಾಲಯದ ಉಪಯೋಗಕ್ಕಾಗಿ ಬಳಕೆ ಮಾಡಿಕೊಳ್ಳಲು ಹಾಗೂ ಪಶುವೈದ್ಯಕೀಯ ಮಹಾವಿದ್ಯಾಲಯದ ಹೊಸ ಕಟ್ಟಡ ಕಾರ್ಯವು ಪೂರ್ಣಗೊಂಡ ನಂತರ ಸದರಿ ಜಾಗವನ್ನು ರೇಷ್ಮೆ ಇಲಾಖೆಗೆ ಪುನಃ ಬಿಟ್ಟುಕೊಡಲು ನಿರ್ಣಯಿಸಲಾಗಿರುವ ಹಿನ್ನೆಲೆಯಲ್ಲಿ ಕೂಡಲೇ ಪ್ರಸ್ತಾವಿತ ರೇಷ್ಮೆ ತರಬೇತಿ ಕೇಂದ್ರದ ಕಟ್ಟಡಗಳನ್ನು ತಾತ್ಕಾಲಿಕವಾಗಿ ಪಶುವೈದ್ಯಕೀಯ ಮಹಾವಿದ್ಯಾಲಯಕ್ಕೆ ಹೊಸ ಕಟ್ಟಡ ನಿರ್ಮಿಸಿ, ಕಾಲೇಜು ಪ್ರಾರಂಭಿಸುವವರೆಗೆ ಹಸ್ತಾಂತರಿಸುವಂತೆ ಆಯುಕ್ತರು, ಪಶುಸಂಗೋಪನೆ ಮತ್ತು ಪಶುವೈದ್ಯ ಸೇವೆಗಳು ಇವರು ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ಕೋರಿದ್ದ ಮೇರೆಗೆ ಪ್ರಸ್ತಾವನೆಯನ್ನು ಪರಿಶೀಲಿಸಿ, ಪ್ರಸ್ತಾವಿತ ಕಟ್ಟಡಗಳನ್ನು ಕರ್ನಾಟಕ ಪಶು ವೈದ್ಯಕೀಯ ಮಹಾವಿದ್ಯಾಲಯ ಪ್ರಾರಂಭಿಸುವುದಕ್ಕಾಗಿ ನೀಡಲು ಈ ಬಗ್ಗೆ ಸೂಕ್ತ ಪ್ರಸ್ತಾವನೆಯನ್ನು ರೇಷ್ಮೆ ಆಯುಕ್ತರ ಅಭಿಪ್ರಾಯದೊಂದಿಗೆ ಒದಗಿಸುವಂತೆ ರೇಷ್ಮೆ ಆಯುಕ್ತರನ್ನು ಕೋರಿದ್ದು, ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ರೇಷ್ಮೆ ಆಯುಕ್ತರು ಕಳುಹಿಸಿರುವ ಪ್ರಸ್ತಾವನೆಯನ್ನು ಪುನಃ ಪರಿಶೀಲಿಸಲಾಯಿತು. ಪ್ರಸ್ತಾವಿತ ಕಟ್ಟಡಗಳನ್ನು ಪಶುವೈದ್ಯಕೀಯ ಕಾಲೇಜು ಪ್ರಾರಂಭಿಸಲು ನೀಡುವ ಕುರಿತಂತೆ ದಿನಾಂಕ:25.5.2007 ರಂದು ಮಾನ್ಯ ರೇಷ್ಮೆ ಸಚಿವರು ಹಾಸನಕ್ಕೆ ಭೇಟಿ ನೀಡಿ ಪರಿಶೀಲಿಸಿದ್ದು ಮತ್ತು ರೇಷ್ಮೆ ಆಯುಕ್ತರು ದಿನಾಂಕ:26.5.2007 ರಂದು ಜಿಲ್ಲಾಧಿಕಾರಿಗಳು, ಹಾಸನ ಮತ್ತು ಪಶುಸಂಗೋಪನೆ ಇಲಾಖೆಯ ಅಧಿಕಾರಿಗಳೊಡನೆ ಸ್ಥಳ ಪರಿಶೀಲನೆ ಮತ್ತು ಸಭೆ ನಡೆಸಿದ್ದು, ಅದರಲ್ಲಿಯ ತೀರ್ಮಾನದನ್ವಯ ರೇಷ್ಮೆ ಆಯುಕ್ತರು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ:30.5.2007ರ ಪತ್ರದಲ್ಲಿ ಶಿಫಾರಸ್ಸು ಮಾಡಿರುವಂತೆ ರೇಷ್ಮೆ ಇಲಾಖೆಯು ಹಾಸನ ತರಬೇತಿ ಸಂಸ್ಥೆ ಚಿಕ್ಕಕಡಲೂರು ಇಲ್ಲಿ ಹೊಂದಿರುವ 25 ಕಟ್ಟಡಗಳಲ್ಲಿ 11 ಕಟ್ಟಡಗಳನ್ನು ಪಶು ವೈದ್ಯಕೀಯ ಕಾಲೇಜನ್ನು ತಾತ್ಕಾಲಿಕವಾಗಿ ನಡೆಸಲು ಪಶುಸಂಗೋಪನೆ ಮತ್ತು ಪಶುವೈದ್ಯ ಸೇವೆಗಳು ಇಲಾಖೆಗೆ ನೀಡಲು ತೀರ್ಮಾನಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 10 ರೇಯೋವಿ 2007, ಬೆಂಗಳೂರು, ದಿನಾಂಕ: 20ನೇ ಜುಲೈ 2007.**

ಪ್ರಸ್ತಾವನೆಯಲ್ಲಿ ವಿವರಿಸಿರವ ಕಾರಣಗಳ ಹಿನ್ನಲೆಯಲ್ಲಿ ರೇಷ್ಮೆ ಇಲಾಖೆಯ ರೇಷ್ಮೆ ತರಬೇತಿ ಸಂಸ್ಥೆ, ಹಾಸನ ಇಲ್ಲಿರುವ 25 ಕಟ್ಟಡಗಳಲ್ಲಿ ಈ ಕೆಳಗಿನ 11 ಕಟ್ಟಡಗಳನ್ನು (ವಿಸ್ತೀರ್ಣ 1835.1 ಚದರ ಮೀಟರುಗಳು) ಪಶುವೈದ್ಯಕೀಯ ಕಾಲೇಜನ್ನು ಪ್ರಾರಂಭಿಸುವುದಕ್ಕಾಗಿ ಹಾಗೂ ಅರ್ಧ ಎಕರೆ ಜಮೀನನ್ನು ಆಟದ ಮೈದಾನಕ್ಕಾಗಿ ತಾತ್ಕಾಲಿಕವಾಗಿ ಪಶು ಸಂಗೋಪನೆ ಮತ್ತು ಪಶು ವೈದ್ಯ ಸೇವಾ ಇಲಾಖೆಗೆ ಹಸ್ತಾಂತರಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ. ಸಂ. | ಪಿ.ಡಬ್ಲ್ಯೂ.ಡಿ. ರವರು ನೀಡಿರುವ ಕಟ್ಟಡ ಕ್ರಮ ಸಂಖ್ಯೆ | ಕಟ್ಟದ ಹೆಸರು | ವಿಸ್ತೀರ್ಣ (ಚ.ಮೀ. ಗಳಲ್ಲಿ) | ಬಳಸಿಕೊಳ್ಳಬಹುದಾದ ಉದ್ದೇಶ |
|---|---|---|---|---|
| 1. | 11 | ದೊಡ್ಡಹುಳು ಸಾಕಾಣಿಕೆ ಕಟ್ಟಡ | 162.6 | ಆಡಳಿತ ಕಛೇರಿ ಸಂಕೀರ್ಣ ಹಾಗೂ ಸಿಬ್ಬಂದಿ ಕೊಠಡಿ |
| 2. | 12 | ಮೌಂಟಿಂಗ್ ಹಾಲ್ | 108.0 | ಪ್ರಯೋಗಾಲಯ |
| 3. | 13 | ಎಂ.ಸಿ.ಆರ್.ಸಿ. | 62.5 | ಪ್ರಯೋಗಾಲಯ-2 |

| ಕ್ರ. ಸಂ. | ಪಿ.ಡಬ್ಲ್ಯೂ.ಡಿ. ರವರು ನೀಡಿರುವ ಕಟ್ಟಡ ಕ್ರಮ ಸಂಖ್ಯೆ | ಕಟ್ಟದ ಹೆಸರು | ವಿಸ್ತೀರ್ಣ (ಚ.ಮೀ. ಗಳಲ್ಲಿ) | ಬಳಸಿಕೊಳ್ಳಬಹುದಾದ ಉದ್ದೇಶ |
|---|---|---|---|---|
| 4. | 02 | ರೀಲಿಂಗ್ ಹಾಲ್ | 500.0 | ತರಗತಿ ಕೊಠಡಿಗಳು ಮತ್ತು ಪ್ರಯೋಗಾಲಯ |
| 5. | 04 | ಮಹಿಳಾ ವಸತಿಗೃಹ | 480.0 | ಪುರುಷರ ವಿದ್ಯಾರ್ಥಿ ನಿಲಯ |
| 6. | 05 | ಕ್ಯಾಟಲ್ ಶೆಡ್ | 88.0 | ಕ್ಯಾಂಟೀನ್ |
| 7. | 22 | ರೇಷ್ಮೆ ಉಪನಿರ್ದೇಶಕರ ವಸತಿ ನಿಲಯ | 144.0 | ಬ್ಯಾಚುಲರಸ್ ವಸತಿ ಗೃಹಗಳು |
| 8. | 15 | ರೇಷ್ಮೆ ಸಹಾಯಕ ನಿರ್ದೇಶಕರ ವಸತಿ ನಿಲಯ | 80.0 | ಮಹಿಳಾ ವಿದ್ಯಾರ್ಥಿ ನಿಲಯ |
| 9. | 06 | ಡಿ-ಗ್ರೂಪ್ ವಸತಿ ಗೃಹಗಳು-3 ಟ್ವಿನ್ ಕ್ವಾರ್ಟಸ್-6 ಸಂಖ್ಯೆ | 210.0 | ಸಿಬ್ಬಂದಿ ವಸತಿ ಗೃಹಗಳು |
| | **ಕಟ್ಟಡಗಳು ಒಟ್ಟು ಸಂಖ್ಯೆ:11** | | **1835.1** | **11 ಕಟ್ಟಡಗಳು** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭಾರತಿ ಆರ್. ನಾಯಕ್**

ಪಿ.ಆರ್. 1391

ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ವಾರದ ಮಲಕಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ರಾಮನಗರ, ಇವರ ಪರಿವೀಕ್ಷಣಾ ಅವಧಿಯನ್ನು ಘೋಷಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ನಂ. ಲಾ 56 ಪಿಪಿಇ 99, ದಿನಾಂಕ: 12.01.2000.
2. ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಎನ್/ಸಿಶಾ-1/174/2002-03, ದಿನಾಂಕ: 05.06.2007.

**ಪ್ರಸ್ತಾವನೆ:**

ಶ್ರೀ ವಾರದ ಮಲಕಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ರಾಮನಗರ ಇವರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರ ಹುದ್ದೆಗೆ ಮೇಲೆ ಓದಲಾದ (1)ರ (ಕ್ರ.ಸಂ.10) ಸರ್ಕಾರದ ಆದೇಶದಲ್ಲಿ ಆಯ್ಕೆಹೊಂದಿ ದಿನಾಂಕ:19.01.2000ರ ಮಧ್ಯಾಹ್ನ ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ದಾವಣಗೆರೆ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಇವರು ಸದರಿ ಹುದ್ದೆಗೆ ನಿಗದಿಪಡಿಸಿದ ಅಕೌಂಟ್ಸ್ ಹೈಯರ್, ಜನರಲ್ ಲಾ ಭಾಗ-1, ಪತ್ರಿಕೆ-2, ಇಲಾಖಾ ಪರೀಕ್ಷೆಗಳನ್ನು ಪರಿವೀಕ್ಷಣಾ ಅವಧಿಯಲ್ಲಿ ತೇರ್ಗಡೆ ಹೊಂದಿರುತ್ತಾರೆ ಹಾಗೂ ಎಸ್.ಎಸ್.ಎಲ್.ಸಿ.ಯ ಪರೀಕ್ಷೆಯಲ್ಲಿ ಇವರು ಕನ್ನಡವನ್ನು ಒಂದು ವಿಷಯವನ್ನಾಗಿ ಪಾಸು ಮಾಡಿರುವುದರಿಂದ ಇವರಿಗೆ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದಕ್ಕೆ ವಿನಾಯಿತಿ ಪ್ರಮಾಣ ಪತ್ರವನ್ನು ನೀಡಿರುವುದಾಗಿ ತಿಳಿಸಿ, ದಿನಾಂಕ: 19.01.2000 ರಿಂದ 18.01.2002ರ ಅವಧಿಯಲ್ಲಿ ಇವರ ಸೇವೆಯು ತೃಪ್ತಿಕರವಾಗಿರುವುದರಿಂದ ಮತ್ತು ಪರಿವೀಕ್ಷಣಾ ಅವಧಿಯಲ್ಲಿ ಯಾವುದೇ ಅಸಾಧಾರಣ ರಜೆ ಪಡೆದಿರುವುದಿಲ್ಲ. ಅಧಿಕಾರಿಯವರ ವಿರುದ್ದ ಸದರಿ ಅವಧಿಯಲ್ಲಿ ಅವರ ಕಾರ್ಯ ನಿರ್ವಹಣಾ ವರದಿಯಲ್ಲಿ ಯಾವುದೇ ವ್ಯತಿರಿಕ್ತ ಷರಾ ಬರೆದಿರುವುದು ಕಂಡುಬರುವುದಿಲ್ಲವಾದ್ದರಿಂದ, ಆ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಮುಗಿಸಿರುವುದಾಗಿ ಘೋಷಿಸುವಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 05.06.2007ರ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 66 ಪಿಪಿಇ 2007, ಬೆಂಗಳೂರು, ದಿನಾಂಕ: 30ನೇ ಜುಲೈ 2007**

ಪ್ರಸ್ತಾವನೆಯಲ್ಲಿನ ವಿಷಯವನ್ನು ಸರ್ಕಾರವು ಪರಿಶೀಲಿಸಿ, ಶ್ರೀ ವಾರದ ಮಲಕಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ರಾಮನಗರ, ಇವರ ಪರಿವೀಕ್ಷಣಾ ಅವಧಿಯನ್ನು 1977ರ ಕರ್ನಾಟಕ ಸಿವಿಲ್ ಸೇವೆಗಳೂ (ಪರಿವೀಕ್ಷಣಾ) ನಿಯಮಗಳ ನಿಯಮ 5(1)(ಎ)ರ ಅನ್ವಯ ದಿನಾಂಕ:19.01.2002ರಂದು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಪಿ.ಆರ್. 1393

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ ಮತ್ತು ಸು ಹಾಗೂ ಕಾಫಿಪೋಸ ಮತ್ತು ಅಭಿಯೋಗ)

**ತಿದ್ದುಪಡಿ ಸಂಖ್ಯೆ:ಒಇ 339 ಪಿಪಿಇ 2007, ಬೆಂಗಳೂರು, ದಿನಾಂಕ: 25ನೇ ಜುಲೈ 2007**

ದಿನಾಂಕ: 21.5.2007ರ ಸರ್ಕಾರದ ಆದೇಶ ನಂ.ಒಇ 470 ಪಿಪಿಇ 2006 ಆದೇಶದ ವಿಷಯದ ಭಾಗದಲ್ಲಿ "1-2ನೇ ಸಾಲಿನಲ್ಲಿ" ಮತ್ತು ಆದೇಶದ ಭಾಗದ "1-2ನೇ ಸಾಲಿನಲ್ಲಿ "ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, (ಹಿಂದಿನ ಸಹಾಯಕ ಸರ್ಕಾರಿ ಅಭಿಯೋಜಕರು)" ಎಂಬುದರ ಬದಲಾಗಿ "ಸಹಾಯಕ ಸರ್ಕಾರಿ ಅಭಿಯೋಜಕರು" ಎಂದು ಓದಿಕೊಳ್ಳುವುದು. ಉಳಿದಂತೆ ದಿನಾಂಕ:21.05.2007ರ ಸರ್ಕಾರದ ಆದೇಶ ನಂ. ಒಇ 470 ಪಿಪಿಇ 2006ರಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಪಿ.ಆರ್. 1394

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ ಮತ್ತು ಸು ಹಾಗೂ ಕಾಫಿಪೋಸ ಮತ್ತು ಅಭಿಯೋಗ)

**ವಿಷಯ:** ಶ್ರೀ ಎಸ್. ಬಷೀರ್ ಅಹಮದ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ.ಎಫ್.ಸಿ. ನ್ಯಾಯಾಲಯ, ರಾಯಚೂರು ಇವರಿಗೆ ಸ್ವಯಂಚಾಲಿತ ವಿಶೇಷ ಹಿರಿಯ ವೇತನ ಶ್ರೇಣಿ ಮಂಜೂರು ಮಾಡುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ-II ನಂ. ಲಾ 161 ಪಿಪಿಇ 86, ದಿನಾಂಕ: 24.7.1989.
2. ಸರ್ಕಾರದ ಆದೇಶ ನಂ. ಲಾ 70 ಪಿಪಿಇ 2001, ದಿನಾಂಕ: 25.07.2001.
3. ಸರ್ಕಾರದ ಆದೇಶ ನಂ. ಎಫ್‌ಡಿ 25 ಎಸ್‌ಆರ್‌ಪಿ 91, ದಿನಾಂಕ: 29.10.91.
4. ಸರ್ಕಾರದ ಆದೇಶ ನಂ. ಎಫ್‌ಡಿ 2 ಎಸ್‌ಆರ್‌ಪಿ 99, ದಿನಾಂಕ: 10.1.1999.
5. ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಇವರ ಪತ್ರ ನಂ. ಡಿಪಿಎನ್/ಸಿಶಾ-1/176/1/2006-07, ದಿನಾಂಕ: 9.1.2007.

**ಪ್ರಸ್ತಾವನೆ:**

ಶ್ರೀ ಎಸ್. ಬಷೀರ್ ಅಹಮದ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ.ಎಫ್.ಸಿ. ನ್ಯಾಯಾಲಯ, ರಾಯಚೂರು ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ:24.7.1989ರ ಕ್ರ.ಸಂ. 41ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ ದಿನಾಂಕ:02.08.1989ರಂದು ಪೂರ್ವಾಹ್ನ ಸಹಾಯಕ ಸರ್ಕಾರಿ ಅಭಿಯೋಜಕರಾಗಿ 1ನೇ ಹೆಚ್ಚುವರಿ ಜೆ.ಎಂ.ಎಫ್.ಸಿ. ನ್ಯಾಯಾಲಯ, ಗುಲ್ಬರ್ಗ, ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಯಾವುದೇ ಬಡ್ತಿ ಇಲ್ಲದೆ 10 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿದ್ದಕ್ಕಾಗಿ ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡಲಾಗಿದೆ.

ಸದರಿ ಅಧಿಕಾರಿಯವರು ದಿನಾಂಕ: 02.08.2004ರವರೆಗೆ ಅದೇ ಹುದ್ದೆಯಲ್ಲಿ ಯಾವುದೇ ಬಡ್ತಿಯಿಲ್ಲದೆ 15 ವರ್ಷಗಳನ್ನು ತೃಪ್ತಿಕರವಾಗಿ ಕರ್ತವ್ಯ ನಿರ್ವಹಿಸಿರುತ್ತಾರೆ. ಸದರಿಯವರು ಹುದ್ದೆಗೆ ನಿಗದಿಪಡಿಸಲಾದ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿರುತ್ತಾರೆ. ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ/ಹೂಡಲು ಉದ್ದೇಶಿಸಿರುವುದಿಲ್ಲ, ಸ್ವಯಂಚಾಲಿತ ವಿಶೇಷ ಹಿರಿಯ ವೇತನ ಶ್ರೇಣಿ ಮಂಜೂರು ಮಾಡುವ ದಿನಾಂಕಕ್ಕೆ ನಿಕಟಪೂರ್ವ 5 ವರ್ಷಗಳ ಕಾರ್ಯನಿರ್ವಹಣಾ ವರದಿಯಲ್ಲಿ ಪ್ರತಿಕೂಲ ಷರಾ ಇರುವುದಿಲ್ಲ. 15 ವರ್ಷಗಳ ವರದಿಯಲ್ಲಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಹುದ್ದೆಗೆ ಬಡ್ತಿ ನೀಡಿರುವುದು, ನೀಡಲಾದ ಬಡ್ತಿಯನ್ನು ಇವರು ನಿರಾಕರಿಸಿರುವುದು ಸೇವಾ ದಾಖಲೆಯಿಂದ ಕಂಡುಬರುವುದಿಲ್ಲವಾದ್ದರಿಂದ ಇವರು ಸ್ವಯಂಚಾಲಿತ ವಿಶೇಷ ಹಿರಿಯ ವೇತನ ಶ್ರೇಣಿ ಪಡೆಯಲು ಅರ್ಹರಿರುವುದರಿಂದ ಮೇಲೆ ಓದಲಾದ (3) ಮತ್ತು (4) ರಂತೆ ಸದರಿ ಅಧಿಕಾರಿಯವರಿಗೆ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ವೇತನ ಮುಂಬಡ್ತಿ) ನಿಯಮಗಳು, 1991ರ ಅನ್ವಯ ರೂ.6300-1560-7200-200-8800-260- 10880-320-11840ರ ವೇತ ಶ್ರೇಣಿ ಹೊಂದಿರುವ ಶ್ರೀ ಎಸ್. ಬಷೀರ್ ಅಹಮದ್ ಇವರಿಗೆ ವೇತನ ಶ್ರೇಣಿ ರೂ.7400-200-8800-260- 10880-320-13120ರಲ್ಲಿ ದಿನಾಂಕ: 02.08.2004ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಹಾಗೂ ಸದರಿಯವರು ಹಾಲಿ ಪಡೆಯುತ್ತಿರುವ ಮೂಲ ವೇತನಕ್ಕೆ ಒಂದು ವಾರ್ಷಿಕ ವೇತನ ಬಡ್ತಿಯನ್ನು ನೀಡಿ ಮೂಲವೇತನವನ್ನು ನಿಗದಿಪಡಿಸುವಂತೆ ಮೇಲೆ ಓದಲಾದ (5)ರಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಸರ್ಕಾರವನ್ನು ಕೋರಿರುತ್ತಾರೆ. ಈ ಬಗ್ಗೆ ದಿನಾಂಕ: 26.06.2007ರಂದು ನಡೆದ ಇಲಾಖಾ ಮುಂಬಡ್ತಿ ಸಮಿತಿ ಸಭೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 71 ಪಿಪಿಇ 2007, ಬೆಂಗಳೂರು, ದಿನಾಂಕ: 27ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಶ್ರೀ ಎಸ್. ಬಷೀರ್ ಅಹಮದ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ.ಎಫ್.ಸಿ. ನ್ಯಾಯಾಲಯ, ರಾಯಚೂರು ಇವರು ಸಹಾಯಕ ಸರ್ಕಾರಿ ಭಿಯೋಜಕರ ಹುದ್ದೆಯಲ್ಲಿ ಬಡ್ತಿಯಿಲ್ಲದೆ ದಿನಾಂಕ:02.08.1989 ಪೂರ್ವಾಹ್ನದಿಂದ ದಿನಾಂಕ: 01.08.2004 ರವರೆಗೆ 15 ವರ್ಷಗಳ ಯಾವುದೇ ಬಡ್ತಿ ಇಲ್ಲದೆ ಸೇವೆ ಸಲ್ಲಿಸಿರುವುದರಿಂದ ಸರ್ಕಾರದ ಅಧಿಸೂಚನೆ ನಂ. ಎಫ್‌ಡಿ 25 ಎಸ್‌ಆರ್‌ಪಿ 91, ದಿನಾಂಕ:29.10.1991ರನ್ವಯ ಸ್ವಯಂಚಾಲಿತ ವಿಶೇಷ ಹಿರಿಯ ವೇತನ ಶ್ರೇಣಿ ರೂ. 7400-200-8800-260-10880-320-13120 ರಲ್ಲಿ ಹಾಲಿ ಪಡೆಯುತ್ತಿರುವ ಮೂಲ ವೇತನಕ್ಕೆ ಒಂದು ವಾರ್ಷಿಕ ವೇತನ ಬಡ್ತಿಯನ್ನು ದಿನಾಂಕ: 02.08.2004 ರಿಂದ ಅನ್ವಯವಾಗುವಂತೆ ನೀಡಿ ಮೂಲವೇತನವನ್ನು ನಿಗಧಿಪಡಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಪಿ.ಆರ್. 1395

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ ಮತ್ತು ಸು ಹಾಗೂ ಕಾಫಿಪೋಸ ಮತ್ತು ಅಭಿಯೋಗ)

**ತಿದ್ದುಪಡಿ**

**ಸಂಖ್ಯೆ: ಒಇ 333 ಪಿಪಿಇ 2007, ಬೆಂಗಳೂರು, ದಿನಾಂಕ: 20ನೇ ಜುಲೈ 2007**

ದಿನಾಂಕ: 11.06.2007ರ ಸರ್ಕಾರದ ಆದೇಶ ನಂ. ಒಇ 75 ಪಿಪಿಇ 2007 ಆದೇಶದ ವಿಷಯ ಭಾಗದ ಮೊದಲನೇ ಸಾಲಿನಲ್ಲಿ, ಪ್ರಸ್ತಾವನೆಯ ಮೊದಲನೇ ಸಾಲಿನಲ್ಲಿ ಮತ್ತು ಆದೇಶ ಭಾಗದ 1-2ನೇ ಸಾಲಿನಲ್ಲಿ " ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು" ಎಂಬುದರ ಬದಲಾಗಿ "ಸಹಾಯಕರು ಅಭಿಯೋಗ ನಿರ್ದೇಶಕರು" ಎಂದು ಓದಿಕೊಳ್ಳುವುದು. ಉಳಿದಂತೆ ದಿನಾಂಕ 11.06.2007ರ ಸರ್ಕಾರದ ಆದೇಶ ನಂ. ಒಇ 75 ಪಿಪಿಇ 2007ರಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಪಿ.ಆರ್. 1396

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ ಮತ್ತು ಸು ಹಾಗೂ ಕಾಫಿಪೋಸ ಮತ್ತು ಅಭಿಯೋಗ)

## PERSONNEL AND ADMINISTRATIVE REFORMS SECRETARIAT

**Sub :** Reimbursement of the cost of stents.

**Preamble:**

By an amendment effected to the Karnataka Government Servants' (Medical Attendance) Rules, 1963 by Notification dated 24.7.2007; a provision has been made to reimburse the expenditure incurred on stents used in angioplasty and such other procedures. The question of fixing the rates at which reimbursement of the cost of the stents should be allowed and of the prescription of the procedure to be adopted while claiming and sanctioning such reimbursement have been examined. Hence this order.

**Government Order No. DPAR 1 SMR 2007, Bangalore, Dated: 24th July 2007**

The rates at which the expenditure incurred on the purchase of different types of stents are as indicated below:

| | | | |
|---|---|---|---|
| (i) | Bare Metal Stent (driver stent, prolink stent, etc.) | - | Rs. 35,000-00 |
| (ii) | Drug Eluting Stent - Sypher/ Xience V | - | Rs. 1,00,000-00 (maximum) |
| (iii) | Other Drug Eluting Stents - Pronova, Taxcor, coroflex please, etc. | - | Rs. 70,000-00 |
| (iv) | Endeavour Stent | - | Rs. 98,000-00 |
| (v) | Taxus Stent | - | Rs. 80,000-00 |

2. Drug Eluting Stents may be used only in cases where the following indications are present:
   1) Patient should be diabetic
   2) Blockages in Left Anterior Descending Artery (LAD) or any vessel supplying large area of myocardium
   3) Post Bypass Surgery patient
   4) Single surviving vessel
   5) Instant re-stenosis following previous Angioplastry with Bare metal stent.

The number of drug eluting stent used in one patient should be limited to one only. The number of Bare Metal Stent used in one patient should not exceed three in number.

While claiming reimbursement of the expenditure on stents, the Lot Number of stent and Pouch of the stent should enclosed.

By Order and in the name of the Governor of Karnataka,

**P. MARKANDEYA**

P.R. 1397

Under Secretary to Government,

Department of Personnel and Administrative Reforms (Service Rules-2).

## ಸಹಕಾರ ಸಚಿವಾಲಯ

**ವಿಷಯ:** ಶ್ರೀ ಗೋಕರ್ಣನಾಥ ಕೋ-ಆಪರೇಟಿವ್ ಬ್ಯಾಂಕ್ ನಿಯಮಿತ, ಮಂಗಳೂರುರವರು ಸರ್ಕಾರಕ್ಕೆ ಹೆಚ್ಚಿಗೆ ಪಾವತಿಸಿರುವ ಲೆಕ್ಕ ಪರಿಶೋಧನಾ ಶುಲ್ಕ ರೂ. 1,04,612/-ಗಳನ್ನು ಮರುಪಾವತಿ ಮಾಡುವ ಬಗ್ಗೆ.

**ಓದಲಾಗಿದೆ:**
1. ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ಪತ್ರದ ಸಂಖ್ಯೆ: ಎಡಿಎಫ್/ಎಡಿಸಿ/2006-07 ದಿನಾಂಕ: 05.10.2006.
2. ಸರ್ಕಾರದ ಪತ್ರ ಸಂ: ಸಿಒ 161 ಸಿಎಲ್ಎಂ 2006 ದಿನಾಂಕ: 07.04.2007.
3. ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು, ಪತ್ರದ ಸಂಖ್ಯೆ ಎಡಿಎಫ್/ಎಡಿಸಿ/2006-07 ದಿನಾಂಕ: 11.06.2007.

**ಪ್ರಸ್ತಾವನೆ:**

ಶ್ರೀ ಗೋಕರ್ಣನಾಥ ಸಹಕಾರ ಬ್ಯಾಂಕ್ ನಿಯಮಿತ, ಮಂಗಳೂರು ಇವರು ಸರ್ಕಾರಕ್ಕೆ ಹೆಚ್ಚುವರಿಯಾಗಿ ಪಾವತಿಸಿರುವ ರೂ.5,57,847.00ಗಳ ಲೆಕ್ಕಪರಿಶೋಧನಾ ಶುಲ್ಕವನ್ನು ಹಿಂತಿರುಗಿಸುವಂತೆ ಸರ್ಕಾರವನ್ನು ಕೋರಿದ್ದು ಈ ಬಗ್ಗೆ ಲೆಕ್ಕಪರಿಶೋಧನಾ ನಿರ್ದೇಶಕರ ಅಭಿಪ್ರಾಯವನ್ನು ಕೋರಲಾಗಿ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ಸದರಿ ಬ್ಯಾಂಕು 2003-04ನೇ ಸಾಲಿನ ಲೆಕ್ಕಪರಿಶೋಧನಾ ಶುಲ್ಕವನ್ನು ದುಡಿಯುವ ಬಂಡವಾಳದ ಆಧಾರದ ಮೇಲೆ ಲೆಕ್ಕಾಚಾರ ಮಾಡಿ ರೂ.7,72,651.00 ಗಳನ್ನು ದಿನಾಂಕ:24.03.2005ರಂದು ಸರ್ಕಾರಕ್ಕೂ ಪಾವತಿಮಾಡಿದ್ದು 2003-2004ನೇ ಸಾಲಿನ ಲೆಕ್ಕ ಪರಿಶೋಧನಾ ವೆಚ್ಚ ರೂ. 1,04,272.00 ಮತ್ತು 2004-05ನೇ ಸಾಲಿನ ಲೆಕ್ಕಪರಿಶೋಧನಾ ಶುಲ್ಕ 1,04,612.00 ರೂಗಳು ಒಟ್ಟು ರೂ. 2,08,884.00 ರೂಗಳಾಗಿದ್ದು ಹೆಚ್ಚಿಗೆ ಪಾವತಿಸಿದ ಮೊತ್ತ (ರೂ. 7,72,651-2,08,884=5,63,767-00) ರೂ. 5,63,767-00 ರೂಗಳಾಗಿದ್ದು 2005-06ನೇ ಸಾಲಿನಿಂದ ಸದರಿ ಬ್ಯಾಂಕಿನ ಲೆಕ್ಕಪರಿಶೋಧನೆಯನ್ನು ಚಾರ್ಟರ್ಡ್ ಅಕೌಂಟೆಂಡ್ ಅವರಿಂದ ಮಾಡಿಸುತ್ತಿರುವುದರಿಂದ ಹೆಚ್ಚಿಗೆ ಪಾವತಿಸಲ್ಪಟ್ಟ ಲೆಕ್ಕಪರಿಶೋಧನಾ ಶುಲ್ಕ 5,63,767.00ಗಳನ್ನು ಮುಂದಿನ ಸಾಲಿನಲ್ಲಿ ಹೊಂದಾಣಿಕೆ ಮಾಡಿಕೊಳ್ಳುವ ಸಾಧ್ಯತೆ ಇರುವುದಿಲ್ಲವೆಂದು ತಿಳಿಸಿ ಸದರಿ ಮೊತ್ತವನ್ನು ಬ್ಯಾಂಕಿಗೆ ವಾಪಸ್ ನೀಡಲು ಮಂಜೂರಾತಿ ನೀಡಬೇಕೆಂದು ಮೇಲೆ ಓದಲಾದ (1)ರ ಪತ್ರದಲ್ಲಿ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರು ಶಿಫಾರಸ್ಸು ಮಾಡಿದ್ದು ಮೇಲೆ ಓದಲಾದ (2)ರ ಪತ್ರದಲ್ಲಿ ದಿನಾಂಕ: 27.09.2004ರ ನಂತರದ

ಅವಧಿಗೆ ಪ್ರಾಪ್ತವಾಗಿರುವ ಲೆಕ್ಕ ಪರಿಶೋಧನಾ ಶುಲ್ಕದ ಮೊತ್ತವನ್ನು ತಿಳಿಸುವಂತೆ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರನ್ನು ಕೋರಿದ್ದು ಮೇಲೆ ಓದಲಾದ (3)ರ ಪತ್ರದಲ್ಲಿ 2004-05ನೇ ಸಾಲಿಗೆ ಆಕರಿಸಿದ ಲೆಕ್ಕಪರಿಶೋಧನಾ ವೆಚ್ಚ ರೂ.1,04,612-00 ಗಳಾಗುತ್ತದೆಂದು ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷರಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 161 ಸಿಎಲ್ಎಂ 2006, ಬೆಂಗಳೂರು, ದಿನಾಂಕ: 12ನೇ ಜುಲೈ 2007**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಗೋಕರ್ಣನಾಥ ಸಹಕಾರ ಬ್ಯಾಂಕ್ ನಿಯಮಿತ., ಮಂಗಳೂರು ಇದು ಸರ್ಕಾರಕ್ಕೆ ಹೆಚ್ಚಿಗೆ ಪಾವತಿಸಿರುವ ಲೆಕ್ಕಪರಿಶೋಧನಾ ಶುಲ್ಕ ರೂ.1,04,612-00 ಗಳನ್ನು (ಒಂದು ಲಕ್ಷದ ನಾಲ್ಕುಸಾವಿರದ ಆರುನೂರ ಹನ್ನೆರಡು ರೂಗಳು ಮಾತ್ರ) ಸದರಿ ಸಂಘಕ್ಕೆ ಮರುಪಾವತಿಸಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು 2007-08ನೇ ಸಾಲಿನಲ್ಲಿ ಒದಗಿಸಿರುವ ಲೆಕ್ಕ ಶೀರ್ಷಿಕೆ "0425-00-900-0-00 ವಜಾ ವಾಪಸಾತಿ" ಅಡಿಯಲ್ಲಿ ಭರಿಸತಕ್ಕದ್ದು.

ಈ ಮೊತ್ತವನ್ನು ಸಹಕಾರ ಲೆಕ್ಕ ಪರಿಶೋಧನಾ ಜಂಟಿ ನಿಬಂಧಕರು (ಆಡಿಟ್-2) ಸಹಕಾರ ಲೆಕ್ಕಪರಿಶೋಧನಾ ನಿರ್ದೇಶಕರ ಕಛೇರಿ ಬೆಂಗಳೂರು ಇವರು ಹಣ ಸಂದಾಯ ರಸೀತಿಯ ಮೂಲಕ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರು ಬೆಂಗಳೂರು ಇವರ ಮೇಲು ಸಹಿ ಪಡೆದು ಖಜಾನೆಯಿಂದ ಡ್ರಾ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:ಆಇ.212.ವೆಚ್ಚ.2.2007 ದಿನಾಂಕ:27.03.2007 ಮತ್ತು ಸಂ. ಆಇ. 428 ವೆಚ್ಚ-2/2007 ದಿನಾಂಕ: 05.07.2007ರಲ್ಲಿ ನೀಡಿರುವ ಒಪ್ಪಿಗೆ ಹಾಗೂ ಸರ್ಕಾರಿ ಆದೇಶದ ಸಂಖ್ಯೆ: ಎಫ್‌ಡಿ-1/ಟಿಎಫ್‌ಪಿ/2001 ದಿನಾಂಕ: 02.02.2001ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1401

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ಬೀದರ್ ವಿಮಾನ ನಿಲ್ದಾಣದ ಅಭಿವೃದ್ಧಿ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಮೂಅಇ 20 ರಾವಿ 2004, ದಿನಾಂಕ 23.3.2007.
2. ಜಿಲ್ಲಾಧಿಕಾರಿಗಳು, ಬೀದರ್ ಜಿಲ್ಲೆ ಇವರ ಪತ್ರ ಸಂ. ಕಂ.ಎಲ್ಎನ್‌ಡಿ:ಸಿಆರ್ 103 2007-08/3378 ದಿನಾಂಕ: 16.6.07

**ಪ್ರಸ್ತಾವನೆ:**

ಬೀದರ್‌ನಲ್ಲಿರುವ ರಕ್ಷಣಾ ಇಲಾಖೆಯ ವಿಮಾನ ನಿಲ್ದಾಣವನ್ನು ನಾಗರೀಕ ವಿಮಾನಯಾನಕ್ಕೆ ಉಪಯೋಗಿಸಲು ರಕ್ಷಣಾ ಇಲಾಖೆಯ ತಾತ್ವಿಕ ಒಪ್ಪಿಗೆ ಸಿಕ್ಕಿರುತ್ತದೆ. ಇದಕ್ಕೆ ಬೇಕಾಗುವ ಮೂಲ ಸೌಕರ್ಯ ಒದಗಿಸಲು ಹೆಚ್ಚುವರಿ ಭೂಮಿಯನ್ನು ನೀಡಲು ಭಾರತೀಯ ವಿಮಾನ ಪ್ರಾಧಿಕಾರವು ಮನವಿಯನ್ನು ಸಲ್ಲಿಸಿದ್ದು ಅಗತ್ಯ ಭೂಮಿಯ ಸ್ವಾಧೀನಕ್ಕಾಗಿ ರಾಜ್ಯದ ಬೆಂಬಲವನ್ನು ಒದಗಿಸಲು ಸರ್ಕಾರದ ಮಂಜೂರಾತಿಯನ್ನು ಉಲ್ಲೇಖ (1)ರ ಆದೇಶದಲ್ಲಿ ನೀಡಲಾಗಿದೆ.

2. ಮೇಲೆ ಉಲ್ಲೇಖ (2)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಬೀದರ್ ಜಿಲ್ಲೆ ಇವರು ಬೀದರ್ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಅಗತ್ಯವಿರುವ ಜಮೀನಿನ ವಿವರ ಹಾಗೂ ಮೌಲ್ಯ ತಿಳಿಸಿರುತ್ತಾರೆ.

3. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಮೂಅಇ 20 ರಾಅವಿ 2004, ಬೆಂಗಳೂರು, ದಿನಾಂಕ: 27ನೇ ಜುಲೈ 2007**

ಮೇಲಿನ ಪ್ರಸ್ತಾವನೆಯ ಕೂಲಂಕಷ ಪರಿಶೀಲನೆಯ ನಂತರ ಬೀದರ್‌ನಲ್ಲಿರುವ ರಕ್ಷಣಾ ಇಲಾಖೆಯ ವಿಮಾನ ನಿಲ್ದಾಣದಲ್ಲಿ ಸಿವಿಲ್ ಎನ್‌ಕ್ಲೇವ್ ಮೂಲಸೌಲಭ್ಯ ನಿರ್ಮಾಣಕ್ಕಾಗಿ ಅಗತ್ಯವಾದ ಭೂಸ್ವಾಧೀನ ಮತ್ತು ಅಭಿವೃದ್ಧಿ ಕಾರ್ಯಗಳಿಗಾಗಿ ರೂ.2.00 ಕೋಟಿಗಳನ್ನು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

2. ಈ ವೆಚ್ಚವನ್ನು 2007-08ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 5465-01-190-1-05 (P) 211 ಬಂಡವಾಳ ಇದರಡಿಯಲ್ಲಿ ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿಗಾಗಿ ಒದಗಣೆ ಮಾಡಿರುವ ರೂ. 50.00 ಕೋಟಿಗಳ ಆಯವ್ಯಯದಿಂದ ಭರಿಸತಕ್ಕದ್ದು.

3. ಈ ಮೊತ್ತವನ್ನು ಮುಖ್ಯ ಕಾರ್ಯನಿರ್ವಾಹಣಾ ಅಧಿಕಾರಿ ಹಾಗೂ ಕಾರ್ಯನಿರ್ವಾಹಕ ಸದಸ್ಯರು, ಕರ್ನಾಟಕ ಕೈಗಾರಿಕೆ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು ಇವರು ಪೇಯೀಸ್ ರಸೀದಿಯ (Payees Receipt) ಮುಖೇನ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜು ಪಡೆದು ಹಣ ತೆಗೆಯಬಹುದಾಗಿದೆ.

3. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂ. ಆಇ 1161 ವೆಚ್ಚ-1/07 ದಿನಾಂಕ: 20.07.07ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಂಜುಳಗೀತ**

ಪಿ.ಆರ್. 1405

ಸರ್ಕಾರದ ಅಧೀನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಸೇಡಂ ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗದ ಉಗ್ರಾಣ ಕೊರತೆಗೆ ಹಾಗೂ ಹಣ ದುರುಪಯೋಗದ ಬಗ್ಗೆ - ಇಲಾಖಾ ವಿಚಾರಣೆ ನಡೆಸಿದ ನಂತರ ಆರೋಪಿತರ ವಿರುದ್ಧ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1. ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರ್ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ. ಮು ಇಂ: ಗ್ರಾಅಇಂಇ : ಬೆಂ :ಸಿ-7: ಶಿಸ್ತು ಕ್ರಮ:2005-06 : 90, ದಿನಾಂಕ: 15.04.05.
2. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರ ಪತ್ರ ಸಂಖ್ಯೆ. ಜಿಪಗು: ಆಡಳಿತ:ವಿಚಾರಣೆ:23:2003-04, ದಿನಾಂಕ: 4.7.2005.
3. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ. ಗ್ರಾಅಪ 20 ಇಎನ್‌ಕ್ಯೂ 05 ದಿನಾಂಕ 26.06.06.
4. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ. ಪಿಎಸ್‌ಸಿ : 31 : ಸಿಎನ್‌ಎಸ್ :07, ದಿನಾಂಕ: 21.06.07.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಸೇಡಂ ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗದಲ್ಲಿ ನಡೆದಿದೆ ಎನ್ನಲಾದ ಉಗ್ರಾಣ ಸಾಮಗ್ರಿಗಳ ಕೊರತೆ ಹಾಗೂ ಹಣ ದುರುಪಯೋಗಕ್ಕೆ ಸಂಬಂಧಿಸಿದಂತೆ, ಗುಲ್ಬರ್ಗಾ ಜಿಲ್ಲಾ ಪಂಚಾಯತ್ ಹಂತದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಲಾಗಿದ್ದು, ಆರೋಪಿತರ ಪಟ್ಟಿಯಲ್ಲಿ ಎ ಗುಂಪಿನ ನಿವೃತ್ತ ಅಧಿಕಾರಿ ಒಳಗೊಂಡಿದ್ದರಿಂದ, ಈ ಬಗ್ಗೆ ಮುಂದಿನ ಕ್ರಮಕ್ಕಾಗಿ ಇಲಾಖಾ ವಿಚಾರಣೆ ವರದಿಯನ್ನು ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರು ಸರ್ಕಾರಕ್ಕೆ ಕಳುಹಿಸಿಕೊಟ್ಟಿದ್ದರು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರು ಈ ಕೆಳಕಂಡ ಅಧಿಕಾರಿ / ನೌಕರರುಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ಪರಿಷತ್ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಇವರು ನೇಮಕ ಮಾಡಿದ್ದು, ಸದರಿ ವಿಚಾರಣಾ ವರದಿಯಾನುಸಾರ ಮುಂದಿನ ಕ್ರಮ ಜರುಗಿಸಬೇಕೆಂದು ಕೋರಿದ್ದರು.

1. ಶ್ರೀ ವೀರಾರೆಡ್ಡಿ, ಅಂದಿನ ಕಿರಿಯ ಇಂಜಿನಿಯರ್,
2. ಶ್ರೀ ಬಸಣ್ಣ, ಅಂದಿನ ವಾಹನ ಚಾಲಕ,
3. ಮಹಮ್ಮದ್ ಖಾಸಿಂ, ಅಂದಿನ ವಾಹನ ಚಾಲಕ,
4. ಶ್ರೀ ಅಜೀಜ್ ಅಹಮದ್, ಐಸಿಎಂ,
5. ಶ್ರೀ ಚಂದ್ರಶೇಖರ ಪಾಟೀಲ್, ಅಂದಿನ ದ್ವಿ.ದ.ಸ.
6. ಶ್ರೀ ಬಿ.ಎಫ್. ನಾಯ್ಕರ್, ಅಂದಿನ ಕಿರಿಯ ಇಂಜಿನಿಯರ್,
7. ಶ್ರೀ ಜಿ.ಎಸ್. ದೇವೂರ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್.

ಸದರಿ ವಿಚಾರಣಾ ವರದಿಯಂತೆ ಈ ಕೆಳಕಂಡ ನೌಕರರು ಅವರ ಹೆಸರಿನ ಮುಂದೆ ಕಾಣಿಸಿರುವ ಮೊತ್ತದ ಉಗ್ರಾಣ ಸಾಮಗ್ರಿ ಕೊರತೆಗೆ ಕಾರಣರಾಗಿರುತ್ತಾರೆ.

| | | |
|---|---|---|
| 1. | ಶ್ರೀ ವೀರಾರೆಡ್ಡಿ, ಕಿ.ಇಂ. (ನಿ) | ರೂ. 40,000-00 |
| 2. | ಶ್ರೀ ಬಸಣ್ಣ, ವಾಹನ ಚಾಲಕ (ನಿ) | ರೂ. 47,056-00 |
| 3. | ಶ್ರೀ ಅಜೀಜ್ ಅಹಮದ್, ಐ.ಸಿ.ಎಂ. | ರೂ. 1,14,270-00 |
| 4. | ಶ್ರೀ ಚಂದ್ರಶೇಖರ ಪಾಟೀಲ್, ದ್ವಿ.ದ.ಸ. | ರೂ. 36,000-00 |
| 5. | ಶ್ರೀ ಬಿ.ಎಫ್. ನಾಯ್ಕರ್, ಕಿ.ಇಂ. | ರೂ. 17,534-00 |

ಇದಲ್ಲದೆ ಸದರಿ ಉಪ ವಿಭಾಗದ ಉಗ್ರಾಣ ಸಾಮಗ್ರಿಗಳು ಕಳುವಾಗಿದ್ದು, ಈ ಬಗ್ಗೆಯೂ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ರೂ. 1,31,121-00 ಗಳ ಉಗ್ರಾಣ ಸಾಮಗ್ರಿಗಳ ಕಳುವಿಗೆ ಅಂದಿನ ಸಕಾಇಂ ರಾದ ಶ್ರೀ ಜಿ.ಎಸ್. ದೇವೂರ (ನಿ) ಮತ್ತು ಕಿ.ಇಂ.ರಾದ ಶ್ರೀ ಬಿ.ಎಫ್. ನಾಯ್ಕರ್ ಇವರು ಹೊಣೆಗಾರರಾಗಿದ್ದಾರೆಂದು ವರದಿ ಮಾಡಿರುತ್ತಾರೆ ಹಾಗೂ ಶ್ರೀ ಮೊಹಮ್ಮದ ಖಾಸಿಂ, ವಾಹನ ಚಾಲಕ ಇವರು ಉಗ್ರಾಣ ಸಾಮಾಗ್ರಿಗಳ ಕೊರತೆಗೆ ಕಾರಣರಲ್ಲವೆಂದು ದೃಢಪಟ್ಟಿದೆ ಎಂದು ತಿಳಿಸಿರುತ್ತಾರೆ.

ಅದರಂತೆ, ವಿಚಾರಣಾ ವರದಿಯೊಂದಿಗೆ 2ನೇ ಕಾರಣ ಕೇಳುವ ನೋಟೀಸನ್ನು ದಿನಾಂಕ: 26.06.06 ರಲ್ಲಿ ಆಪಾದಿತ ಅಧಿಕಾರಿ / ನೌಕರರಿಗೆ ಜಾರಿ ಮಾಡಲಾಗಿತ್ತು. ಅದಕ್ಕೆ ಉತ್ತರಿಸುತ್ತಾ ಆಪಾದಿತರು ಲಿಖಿತ ಹೇಳಿಕೆ ಸಲ್ಲಿಸಿ ತಮ್ಮ ವಿರುದ್ಧ ಹೊರಿಸಲಾದ ಆರೋಪಗಳನ್ನು ಅಲ್ಲಗಳೆದಿರುತ್ತಾರೆ. ಸರ್ಕಾರವು ಆಪಾದಿತರ ಲಿಖಿತ ಹೇಳಿಕೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡು, ಆರೋಪಿತರ ವಿರುದ್ಧ ಸಾಬೀತಾದ ಆರೋಪಗಳಿಗನುಗುಣವಾಗಿ ಅವರಿಂದ ದುರುಪಯೋಗವಾದ ಮೊತ್ತವನ್ನು ವಸೂಲಿ ಮಾಡಲು ಹಾಗೂ ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಾವಳಿಗಳ ನಿಯಮ 8 (iii) ರನ್ವಯ ಸೇವೆಯಲ್ಲಿರುವ ಆರೋಪಿತರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಶಾಶ್ವತವಾಗಿ ತಡೆಹಿಡಿಯಲು ಹಾಗೂ ಕೆ.ಸಿ.ಎಸ್.ಆರ್. ನಿಯಮ 214 ರನ್ವಯ ನಿವೃತ್ತರಾದ ಆರೋಪಿತರ ನಿವೃತ್ತಿ ವೇತನದಲ್ಲಿ ಶೇಕಡಾ 10 ರಷ್ಟನ್ನು ಎರಡು ವರ್ಷಗಳ ಕಾಲ ಕಡಿತಗೊಳಿಸುವ ದಂಡನೆಯನ್ನು ಕೆಳಕಂಡಂತೆ ವಿಧಿಸಲು ನಿರ್ಧರಿಸಿ ಸದರಿ ಪ್ರಸ್ತಾವನೆ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿ ಕೋರಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಕರ್ನಾಟಕ ಲೋಕ ಸೇವಾ ಆಯೋಗವು ಆಪಾದಿತರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟ ಹಾಗೂ ಆ ಮೊತ್ತದ ಮೇಲೆ ಶೇಕಡಾ 8 ರಂತೆ ಬಡ್ಡಿ ವಸೂಲು ಮಾಡುವ ನಿಬಂಧನೆಗೆ ಒಳಪಟ್ಟು ಸರ್ಕಾರದ ಪ್ರಸ್ತಾವನೆಗೆ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 20 ಇಎನ್‌ಕ್ಯೂ 05, ಬೆಂಗಳೂರು, ದಿನಾಂಕ: 26ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆ, ಸೇಡಂ ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗದಲ್ಲಿನ ಕೊರತೆ ಹಾಗೂ ಹಣ ದುರುಪಯೋಗ ಪ್ರಕರಣಕ್ಕೆ ಸಂಬಂಧಿಸಿದಂತೆ ಕೆಳಕಂಡ ಆರೋಪಿತರ ವಿರುದ್ಧ ಸಾಬೀತಾದ ಆರೋಪಗಳಿಗನುಗುಣವಾಗಿ ಅವರಿಂದ ದುರುಪಯೋಗವಾದ ಮೊತ್ತವನ್ನು ಹಾಗೂ ಸದರಿ ಮೊತ್ತದ ಮೇಲೆ 2002-03ನೇ ಸಾಲಿನಿಂದ ಇಲ್ಲಿಯವರೆಗೆ

ಶೇಕಡಾ 8ರ ಬಡ್ಡಿಯೊಂದಿಗೆ ವಸೂಲಿ ಮಾಡಲು ಹಾಗೂ ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಾವಳಿಗಳ ನಿಯಮ 8 (iii) ರನ್ವಯ ಸೇವೆಯಲ್ಲಿರುವ ಆರೋಪಿತರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮದೊಂದಿಗೆ ಹಾಗೂ ಕೆ.ಸಿ.ಎಸ್.ಆರ್. ನಿಯಮ 214 ರನ್ವಯ ನಿವೃತ್ತರಾದ ಆರೋಪಿತರ ನಿವೃತ್ತಿ ವೇತನದಲ್ಲಿ ಶೇಕಡಾ 10 ರಷ್ಟನ್ನು ಎರಡು ವರ್ಷಗಳ ಕಾಲ ಕಡಿತಗೊಳಿಸುವ ದಂಡನೆಯನ್ನು ಕೆಳಕಂಡಂತೆ ವಿಧಿಸಿ ಆದೇಶಿಸಿದೆ.

| ಕ್ರ. ಸಂ. | ಹೆಸರು ಮತ್ತು ಹುದ್ದೆ ಶ್ರೀಯುತರಾದ | ಶೇಕಡಾ 8ರ ಬಡ್ಡಿಯೊಂದಿಗೆ ವಸೂಲಿ ಮಾಡಬೇಕಾದ ಮೊತ್ತ (ರೂ.ಗಳಲ್ಲಿ) | ರುಜುವಾತಾದ ಆರೋಪಗಳಿಗಾಗಿ ವಿಧಿಸಲಾದ ದಂಡನೆ |
|---|---|---|---|
| 1. | ಜಿ.ಎಸ್. ದೇವೂರ ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ) | 65,560-00 | ಶೇಕಡಾ 10ರಷ್ಟು ನಿವೃತ್ತಿ ವೇತನವನ್ನು 2 ವರ್ಷಗಳ ಕಾಲ ಕಡಿತಗೊಳಿಸುವುದು. |
| 2. | ವೀರಾರೆಡ್ಡಿ ಅಂದಿನ ಕಿರಿಯ ಇಂಜಿನಿಯರ್ (ನಿವೃತ್ತ) | 40,000-00 | ಶೇಕಡಾ 10ರಷ್ಟು ನಿವೃತ್ತಿ ವೇತನವನ್ನು 2 ವರ್ಷಗಳ ಕಾಲ ಕಡಿತಗೊಳಿಸುವುದು. |
| 3. | ಬಸಣ್ಣ, ಅಂದಿನ ವಾಹನ ಚಾಲಕ, (ನಿವೃತ್ತ) | 47,056-00 | ಶೇಕಡಾ 10ರಷ್ಟು ನಿವೃತ್ತಿ ವೇತನವನ್ನು 2 ವರ್ಷಗಳ ಕಾಲ ಕಡಿತಗೊಳಿಸುವುದು. |
| 4. | ಬಿ.ಎಫ್. ನಾಯ್ಕರ್, ಅಂದಿನ ಕಿರಿಯ ಇಂಜಿನಿಯರ್ | 17,534-00 + 65,560-50 | ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮದೊಂದಿಗೆ ತಡೆಹಿಡಿಯುವುದು. |
| 5. | ಅಜೀಜ್ ಅಹ್ಮದ್, ಅಂದಿನ ಐ.ಸಿ.ಎಂ. | 1,14,270-00 | ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮದೊಂದಿಗೆ ತಡೆಹಿಡಿಯುವುದು. |
| 6. | ಚಂದ್ರಶೇಖರ ಪಾಟೀಲ, ಅಂದಿನ ದ್ವಿತೀಯ ದರ್ಜೆ ಸಹಾಯಕ | 36,000-00 | ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮದೊಂದಿಗೆ ತಡೆಹಿಡಿಯುವುದು. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ**

ಪಿ.ಆರ್. 1406

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## INFRASTRUCTURE DEVELOPMENT SECRETARIAT

**Sub :** Release of funds for Construction of approach road near RoB/RuB constructed by Railways in lieu of LC No.40 & 41 near Tumkur Railway Station-reg.

**Read :** 1) Letter No. W.359/CN/BNC/iDeck dated 1.03.07 received from Executive Engineer/General, Construction, South Western Railway, Bangalore.

2) Letter No. ಸಂಕದ/ಸೇಶಾಬೆಂವೃ/ಎಲ್.ಸಿ.40 ಮತ್ತು 41/ತುವಿ/2006 dated 28.03.07 and 14.6.07 from Chief Engineer, C&B, Bangalore South, Bangalore.

**Preamble:**

The Chief Engineer/General, Construction, SWR, Bangalore in his letter dated 01.03.07 read at Sl.No. (1) above, has informed that, the estimates for the approaches of ROB in lieu of L.C.No. 40 & 41 has not been received from the Chief Engineer (C&B) South, Public Works Department, Bangalore, and he has requested to submit the estimate for approaches to enable to process sharing of 50% cost of approaches work. However, it has been agreed that the approach roads would be constructed by the state Public Works Department.

2. The Chief Engineer, Communication & Building (South), PWD, Bangalore, in his letter dated 14.06.2007 read at Sl.No. (2) above, has furnished details of expenditure for shifting of Telephone cables, electric poles, water supply pipes, vacation of private property and has requested for release of Rs.683.95 lakhs for the same and also for construction of approach roads near RoB in lieu of LC No. 40 & 41 near Tumkur Railway Station. Since this amount is to be shared between Railways and Government of Karnataka on 50:50 cost sharing basis approval of GoK is being given for releasing 342.00 lakhs. Hence this order.

**Government Order No. IDD 65 NSW 2007, Bangalore, Dated: 27th July 2007**

After careful examination of the proposal of the Chief Engineer, Communication & Building (South), Public Works Department Bangalore, Government of Karnataka is pleased to release its share of Rs.3.42 Crore (Three Crore Forty two lakhs) only towards construction of approach roads to the RoB in lieu of LC No. 40 and 41 near Tumkur Railway Station, and also for meeting expenditure connected with shiftings of utilities and acquisition of land.

2. This amount shall be met under the Head of Account "5465-01-190-3-04-KRIDE-RoB-/RuB project-211-Investments (Plan)".

3. The Executive Engineer, Pubic Works Department, Tumkur Division, Tumkur, shall draw this amount on payees receipt duly counter signed by Under Secretary to Government, Infrastructure Development Department. He shall first deposit the amount required for land acquisition with the Deputy commissioner, Tumkur and utilise rest of the amount for construction.

4. This order issues with the concurrence of the Finance Department vide, U.O.Note No.FD 1102 EXP-1/07 dated 18.07.07.

By Order and in the name of the Governor of Karnataka,

**N. MANJULA GEETHA**

Under Secretary to Government,

Infrastructure Development Department.

P.R. 1407

**ಆರ್ಥಿಕ ಸಚಿವಾಲಯ**

**ಆದೇಶ ಸಂಖ್ಯೆ ಎಫ್‌ಡಿ 21 ಎಸ್‌ಆರ್‌ಪಿ 2007, ಬೆಂಗಳೂರು, ದಿನಾಂಕ: 20ನೇ ಜುಲೈ 2007**

**ವಿಷಯ:** ತುಟ್ಟಿಭತ್ಯೆಯ ದರಗಳ ಪರಿಷ್ಕರಣೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 17 ಎಸ್‌ಆರ್‌ಪಿ 2007, ದಿನಾಂಕ 16.5.2007.
2. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 19 ಎಸ್‌ಆರ್‌ಪಿ 2007, ದಿನಾಂಕ 16.5.2007.
3. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 21 ಎಸ್‌ಆರ್‌ಪಿ 2007, ದಿನಾಂಕ 28.5.2007.

ಮೇಲೆ ಕ್ರಮಾಂಕ (3) ರಲ್ಲಿ ಓದಲಾದ ದಿನಾಂಕ: 28.5.2007ರ ಸರ್ಕಾರಿ ಆದೇಶದಲ್ಲಿ ಸರ್ಕಾರವು ದಿನಾಂಕ: 1.1.2007 ರಿಂದ ಜಾರಿಗೆ ಬರುವಂತೆ ರಾಜ್ಯ ಸರ್ಕಾರಿ ನೌಕರರಿಗೆ 2007ರ ಪರಿಷ್ಕೃತ ವೇತನ ಶ್ರೇಣಿಗಳಲ್ಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ವೇತನದ ಶೇ.7 ರಿಂದ ಶೇ.12.25 ಕ್ಕೆ ಹೆಚ್ಚಿಸಿ ಮಂಜೂರು ಮಾಡಿದೆ.

2. ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ದಿನಾಂಕ: 28.5.2007ರ ಸರ್ಕಾರಿ ಆದೇಶದ ಕಂಡಿಕೆ 2 ರಲ್ಲಿ ಸದರಿ ಆದೇಶದಲ್ಲಿ ಮಂಜೂರಾಗಿರುವ ತುಟ್ಟಿಭತ್ಯೆಯನ್ನು ನಗದಾಗಿ ಮರು ಆದೇಶ ಹೊರಡಿಸುವವರೆಗೆ ಪಾವತಿ ಮಾಡಲಾಗುವುದು ಎಂದು ಆದೇಶಿಸಿದೆ.

3. ಈಗ ಸರ್ಕಾರವು ದಿನಾಂಕ: 1.1.2007 ರಿಂದ 31.3.2007ರ ವರೆಗಿನ ಅವಧಿಗೆ ಲಭ್ಯವಾಗುವ ತುಟ್ಟಿಭತ್ಯೆ ಹೆಚ್ಚಳದ ಬಾಕಿಯನ್ನು 2008-09ರ ಆರ್ಥಿಕ ವರ್ಷದಲ್ಲಿ ಸಂದಾಯ ಮಾಡತಕ್ಕದ್ದೆಂದು ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಟಿ. ನಾಯ್ಕ್**

ಸರ್ಕಾರದ ಜಂಟಿ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು-2).

ಪಿ.ಆರ್. 1409

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ಮೆ. ಭಾರತ್ ಶುಗರ್ ಮಿಲ್ಸ್ (ಲಿ) ಈ ಸಕ್ಕರೆ ಕಾರ್ಖಾನೆಯ ಸ್ಥಾಪನಾ ಸ್ಥಳವನ್ನು ಉತ್ತರ ಕನ್ನಡ ಜಿಲ್ಲೆ, ಹಳಿಯಾಳ ತಾಲ್ಲೂಕು, ಕೆಸೊರೊಳ್ಳಿಯಿಂದ ಹುಲ್ಲಟ್ಟಿ ಗ್ರಾಮಕ್ಕೆ ಸ್ಥಳಾಂತರಿಸಲು ಸರ್ಕಾರದ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಪತ್ರ ದಿನಾಂಕ: ಸಿಐ 93 ಎಸ್‌ಜಿಎಫ್ 03 ದಿ: 31.03.03.
2. ಸರ್ಕಾರದ ಪತ್ರ ಸಂಖ್ಯೆ: ಸಿಐ 9007 ಐಡಿ 2006 ದಿ: 15.05.07.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿರುವ ಸರ್ಕಾರದ ಪತ್ರದಲ್ಲಿ ಮೆ. ಭಾರತ ಶುಗರ್ ಮಿಲ್ಸ್ (ಲಿ), ರವರು ಸ್ಥಾಪಿಸಲಿರುವ ಈ ಸಕ್ಕರೆ ಕಾರ್ಖಾನೆಯನ್ನು ಉತ್ತರ ಕನ್ನಡ ಜಿಲ್ಲೆ, ಹಳಿಯಾಳ ತಾಲ್ಲೂಕು, ಕೆಸೊರೊಳ್ಳಿಯಲ್ಲಿ ಸ್ಥಾಪಿಸಲು ಸರ್ಕಾರದ ಅನುಮತಿಯನ್ನು ನೀಡಲಾಗಿತ್ತು. ಸದರಿ ಕಾರ್ಖಾನೆಯನ್ನು ಹಲವಾರು ತಾಂತ್ರಿಕ ಕಾರಣಗಳಿಂದಾಗಿ ಕೆಸೊರೊಳ್ಳಿಯಲ್ಲಿ ಸ್ಥಾಪಿಸಲು ಸಾಧ್ಯವಾಗದ ಕಾರಣ ಈ ಕಾರ್ಖಾನೆ ಸ್ಥಾಪನಾ ಸ್ಥಳವನ್ನು ಹಳಿಯಾಳ ತಾಲ್ಲೂಕು, ಹುಲ್ಲಟ್ಟಿ ಗ್ರಾಮದಲ್ಲಿ ಸ್ಥಾಪಿಸುವುದು ಸೂಕ್ತವಾಗಿದ್ದು, ಈ ಸಂಬಂಧ ದಿನಾಂಕ:11.01.07 ರಂದು ಮಾನ್ಯ ಮುಖ್ಯ ಮಂತ್ರಿಯವರ ಅಧ್ಯಕ್ಷತೆಯಲ್ಲಿ ಸಭೆ ನಡೆದಿದ್ದು, ನಂತರ ಕಾರ್ಯದರ್ಶಿ ವಾಣಿಜ್ಯ ಮತ್ತು ಕೈಗಾರಿಕೆ ರವರು ಸ್ಥಳ ಪರಿಶೀಲನೆ ಮಾಡಿ ಕಾರ್ಖಾನೆ ಸ್ಥಾಪನಾ ಸ್ಥಳವನ್ನು ಕೆಸೊರೊಳ್ಳಿಯಿಂದ ಹುಲ್ಲಟ್ಟಿಗೆ ಸ್ಥಳಾಂತರಿಸುವುದು ಸೂಕ್ತವೆಂದು ಶಿಫಾರಸ್ಸು ಮಾಡಿದ್ದಾರೆ. ಅದರಂತೆ ಉಲ್ಲೇಖ (2)ರಲ್ಲಿರುವ ದಿನಾಂಕ:15.05.07ರ ಪತ್ರದಲ್ಲಿ ಮೆ. ಭಾರತ್ ಶುಗರ್ಸ್ ಮಿಲ್ಸ್ (ಲಿ) ಈ ಸಕ್ಕರೆ ಕಾರ್ಖಾನೆಯನ್ನು ಉತ್ತರ ಕನ್ನಡ ಜಿಲ್ಲೆ, ಹಳಿಯಾಳ ತಾಲ್ಲೂಕು, ಹುಲ್ಲಟ್ಟಿಯಲ್ಲಿ ಸ್ಥಾಪಿಸುವುದು ಸೂಕ್ತವೆಂದು ನಿರ್ಧಾರ ತೆಗುದುಕೊಂಡಿದ್ದು, ಸಂಬಂಧಪಟ್ಟ ಇಲಾಖೆಯು ಸೂಕ್ತ ಕ್ರಮ ತೆಗೆದುಕೊಳ್ಳಲು ಸೂಚಿಸಲಾಗಿದ್ದು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರ ಆದೇಶ ಸಂಖ್ಯೆ: ಸಿಐ 17 ಎಸ್‌ಜಿಎಫ್ 07, ಬೆಂಗಳೂರು, ದಿನಾಂಕ: 21ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಮೆ. ಭಾರತ್ ಶುಗರ್ ಮಿಲ್ಸ್ (ಲಿ) ರವರು ತಮ್ಮ ಕಾರ್ಖಾನೆ ಸ್ಥಾಪನಾ ಸ್ಥಳವನ್ನು ಉತ್ತರ ಕನ್ನಡ ಜಿಲ್ಲೆ, ಹಳಿಯಾಳ ತಾಲ್ಲೂಕು, ಕೆಸೊರೊಳ್ಳಿ ಗ್ರಾಮದಿಂದ ಉತ್ತರ ಕನ್ನಡ ಜಿಲ್ಲೆ, ಹಳಿಯಾಳ ತಾಲ್ಲೂಕು, ಹುಲ್ಲಟ್ಟಿ ಗ್ರಾಮಕ್ಕೆ ಸ್ಥಳಾಂತರಿಸಿಕೊಂಡು 28 ಮೆ.ವ್ಯಾಟ್ ಸಹ ವಿದ್ಯುತ್ ಘಟಕ ಮತ್ತು 45 ಕಿ.ಲೀ. ಸಾಮರ್ಥ್ಯದ ಡಿಸ್ಟಲರಿ ಘಟಕವನ್ನೊಳಗೊಂಡ 3500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಸರ್ಕಾರದ ತಾತ್ವಿಕ ಅನುಮೋದನೆ ನೀಡಲಾಗಿದ್ದು, ಕಾರ್ಖಾನೆಯ ವ್ಯವಸ್ಥಾಪಕರು ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಕೂಡಲೇ ಕ್ರಮವಹಿಸಬೇಕೆಂದು ಆದೇಶಿಸಲಾಗಿದೆ.

ಮುಂದುವರೆದು ಸಹವಿದ್ಯುತ್ ಘಟಕ ಮತ್ತು ಡಿಸ್ಟಲರಿ ಘಟಕ ಸ್ಥಾಪನೆಗೆ ಸಂಬಂಧಪಟ್ಟ ಇಲಾಖೆಗಳಿಂದ ನಿಯಮಾನುಸಾರ ಅನುಮತಿ ಪಡೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 1410

**COMMERCE AND INDUSTRIES SECRETARIAT**

**Sub :** Project proposal of M/s Vasavadatta Cement (Expansion) to increase manufacturing capacity of the "Cement and Thermal Power Generation" at Sedam, Gulbarga District.

**Read :** Proceedings of the 7th State High Level Clearance Committee [SHLCC] meeting held on 28.8.2006.

**Preamble:**

M/s Vasavadatta Cement is a Company owned by M/s Kesoram Industry and a Public Limited., Company registered under Indian Companies Act 1956. The Company is engaged in manufacturing of cement near Sedam Gulbarga District, since 1986. Now the proposed to increase manufacturing capacity of the "Cement and Thermal Power Generation" at Sedam, Gulbarga District. Now the Company proposes to expand the manufacturing capacity of existing cement plant from 4-1MTPA to 9 MTPA and captive and thermal power plant to 30 MW at Sedam, Gulbarga District, with an investment of Rs.625 crores. The project proposes to provide additional employment to 150 persons.

In the proposal submitted before the 7th State High Level Clearance Committee meeting [SHLCC] held on 28.08.2006, the Company had requested for various Infrastructure facilities as well as incentives and concessions.

The State High Level Clearance Committee, [SHLCC] after detailed discussion of the project proposal of the said Company, the committee approved the project of M/s Vasavadatta Cement, and recommended to grant Infrastructure assistance & concessions. Hence the following order.

**Government Order No: CI 7 SPI 2007, Bangalore, Dated: 27th July 2007**

In the circumstances explained above, Government is pleased to approve the project proposal of M/s Vasavadatta Cement is to expend the manufacturing capacity of the "Cement and Thermal Power Generation" at Sedam, Gulbarga District, and proposes to expand the capacity of existing cement plant from 4.1 MTPA to 9 MTPA and captive and thermal power plant to 30 MW at Sedam, Gulbarga District, with an investment of Rs.625 crores in 625 acres of land identified in Injipalli and Sedam Villages, in Gulbarga District , and extend the following, infrastructure facilities, incentives and concessions.

**INFRASTRUCTURE FACILITIES:**

**Land:** KIADB to acquire and allot 500 acres of land, identified by the Company, for which minijg lease is held and additional 152 acres in Injipalli and Sedam Villages in Gulbarga District, on consent basis.

**Power:** 12,000 KVA to be serviced by GESCOM.

**Water:** 17 LGPD to be met out of existing allocation from Kagina River. The promoter is advised to set up sewage treatment plant, adopt water recycling and water harvesting.

**Incentives and Concessions:** As per New Industrial Policy 2006-11

**Environment:** The promoters were advised to obtain CFE from KSPCB and ECC from MOEF, goi.

**Employment:** The Company shall train local people in the required skill sets & provide the employment within SEZ / SEZ units and local employment to be provided as per Government Policy.

**Vender Development:** Identify possibility of Vendor / Ancillary Development, train local youth & facilitate setting up Vendor units by local youths.

**Social Infrastructure Development:** Prepare a plan for Social Infrastructure projects & implement them same, projects like hospital, school, etc., for the local area & affected people.

**Others**

Submit local Vender Development Plan to the Commissioner Industrial Development and Directors of Industries & Commerce, and implement the plan and provide employment to local people as per the Government Policy.

This approval is valid for a period of two years from the date of issue.

By Order and in the name of the Governor of Karnataka,

**K.R. CHANDRAMMA**

P.R. 1411

Desk Officer (Technical Cell)

Commerce & Industries Department.

**ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ**

**ವಿಷಯ:** ಕೃಷಿ ವಿಶ್ವವಿದ್ಯಾಲಯದಲ್ಲಿ ಕೃಷಿಕರಿಗೆ ಮತ್ತು ಕೃಷಿಕರ ಮಕ್ಕಳಿಗೆ 2007-08ನೇ ಸಾಲಿನ ಪ್ರದೇಶದಲ್ಲಿ ಮೀಸಲಿಟ್ಟಿರುವ ಸ್ಥಾನಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ - ಸಮಿತಿ ರಚನೆ.

**ಓದಲಾಗಿದೆ:** 1. ಕುಲಸಚಿವರು, ಕೃಷಿ ವಿಶ್ವವಿದ್ಯಾಲಯ, ಧಾರವಾಡ ರವರ ಪತ್ರ ಸಂಖ್ಯೆ:ಕುಸ:ಸ್ನಾ.ಪ್ರವೇಶ:ಎ-3:2007-08, ದಿನಾಂಕ:29.06.2007.

**ಪ್ರಸ್ತಾವನೆ:**

ಧಾರವಾಡ ಕೃಷಿ ವಿಶ್ವವಿದ್ಯಾನಿಲಯದ ಕುಲಸಚಿವರು ಮೇಲೆ ಓದಲಾದ (1)ರ ಪತ್ರದಲ್ಲಿ 2007-08ನೇ ಸಾಲಿನಲ್ಲಿ ಕೃಷಿಕರ ಮತ್ತು ಕೃಷಿಕರ ಮಕ್ಕಳಿಗೆ ಪ್ರವೇಶದಲ್ಲಿ ಮೀಸಲಿಟ್ಟಿರುವ ಸ್ಥಾನಗಳಿಗೆ ವಿದ್ಯಾರ್ಥಿಗಳಿಗೆ ಆಯ್ಕೆ ಮಾಡಲು ಈ ಕೆಳಕಂಡ ಸದಸ್ಯರನ್ನೊಳಗೊಂಡ ಆಯ್ಕೆ ಸಮಿತಿಯನ್ನು ರಚಿಸುವಂತೆ ಕೋರಿರುತ್ತಾರೆ.

1) ಶಿಕ್ಷಣ ನಿರ್ದೇಶಕರು, ಕೃಷಿ ವಿಶ್ವವಿದ್ಯಾನಿಲಯ, ಧಾರವಾಡ
2) ಜಂಟಿ ಕೃಷಿ ನಿರ್ದೇಶಕರು, ಕೃಷಿ ಇಲಾಖೆ, ಧಾರವಾಡ
3) ಜಂಟಿ ನಿರ್ದೇಶಕರು, ಜಾನುವಾರು ಮತ್ತು ಅಭಿವೃದ್ಧಿ, ಪಶುಸಂಗೋಪನೆ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಬೆಳಗಾಂ.

ಸದರಿ ಪ್ರಸ್ತಾವನೆ ಪರಿಶೀಲಿಸಿದ ಸರ್ಕಾರ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕೃತೋಇ 63 ಕೃವಿವಿ 2003 (ಭಾಗ-1), ಬೆಂಗಳೂರು, ದಿನಾಂಕ: 25ನೇ ಜುಲೈ 2007**

ಧಾರವಾಡ ಕೃಷಿ ವಿಶ್ವವಿದ್ಯಾನಿಲಯದಲ್ಲಿ ಕೃಷಿಕರಿಗೆ ಮತ್ತು ಕೃಷಿಕರ ಮಕ್ಕಳಿಗೆ 2007-08ನೇ ಸಾಲಿನ ಸ್ನಾತಕ ಕೋರ್ಸ್‌ಗಳಿಗೆ ಪ್ರವೇಶದಲ್ಲಿ ಮೀಸಲಿಟ್ಟಿರುವ ಸ್ಥಾನಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವುದಕ್ಕೆ ಈ ಕೆಳಕಂಡಂತೆ ಸಮಿತಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಚಿಸಲಾಗಿದೆ.

1) ಶಿಕ್ಷಣ ನಿರ್ದೇಶಕರು, ಕೃಷಿ ವಿಶ್ವವಿದ್ಯಾನಿಲಯ, ಧಾರವಾಡ
2) ಜಂಟಿ ಕೃಷಿ ನಿರ್ದೇಶಕರು, ಕೃಷಿ ಇಲಾಖೆ, ಧಾರವಾಡ
3) ಜಂಟಿ ನಿರ್ದೇಶಕರು, ಜಾನುವಾರು ಮತ್ತು ಅಭಿವೃದ್ಧಿ, ಪಶುಸಂಗೋಪನೆ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಬೆಳಗಾಂ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಗುರಾಣಿ**

ಪಿ.ಆರ್. 1412

ಸರ್ಕಾರದ ಅಧೀನ ಕಾರ್ಯದರ್ಶಿ,

ಕೃಷಿ ಮತ್ತು ತೋಟಗಾರಿಕೆ ಇಲಾಖೆ.

**HORTICULTURE SECRETARIAT**

**Sub :** "Centrally Sponsored Scheme on Micro Irrigation"- Implementation during 2007-08-reg.

**Read :** 1) G.O.No. AHD 31 HPP 2006 dated 29.6.2006.
2) GOI letter F.No.11-1/2007-Hort dated 25.4.2007.
3) GOI letter No.11-1/2006-Hort dated 11.6.2007.
4) Letter of Director of Horticulture No.DH/JD (drip)/AHO/5/2007-08 dated: 16.7.2007.
5) GOI letter F.No.20-4/2007-Hort dated 19.7.2007.

**Preamble:**

During 2006-07 approval had been accorded for the implementation of "New Centrally Sponsored Scheme on Micro Irrigation" by merging it with district sector scheme "Drip Irrigation-Special subsidy for horticulture crops" (2401-00-108-2-30) vide Government Order read at (1) above. It was implemented under Mission Mode.

2. During 2007-08, Government of India has given administrative approval for implementation of "Centrally Sponsored Scheme on Micro Irrigation" vide Government of India letter read at (2) above. Annual Action Plan of Karnataka State for 2007-08 haas been approved in the 5th meeting of Executive Committee on Micro Irrigation held on 30.5.2007 under the Chairmanship of Secretary, Agriculture and Co-operation, Government of India at New Delhi, vide Government of India letter read at (3) above. The following is the break up.

| Components | Recommendations | |
|---|---|---|
| | Phy. (Ha) | Fin (Lakh Rs.) |
| **Horticultural Crops** | | |
| Drip | 25853 | 3888.42 |
| Sprinkler | 2322 | 139.32 |
| **Sub Total** | **28175** | **4027.74** |
| Admn Cost @1% | | 40.28 |
| **Grand Total** | **28175** | **4068.02** |

3. Director of Horticulture vide letter read at (4) above has informed that in order to utilize the Central share of Rs.4068.02 lakhs there is a requirement of State share to the tune of Rs.3697.35 lakhs and hence, he has requested that administrative approval with the subsidy pattern of 2006-07 be given by the State Government.

4. Government of India vide letter read at (5) above has released an amounts of Rs.1233.82 lakhs to Duputy Directors of Horticulture (ZP) of twenty districts of the State through Electronic Clearance System for implementation of the Centrally Sponsored Scheme on Micro Irrigation during 2007-08 and the State Government shall have to release 20% of the total cost for each district towards successful implementation of the scheme with 50% subsidy to all farmers. However the State Government has been providing a subsidy of 100% in Bijapur and Kolar districts and subsidy of 75% in other districts. Hence, Government of India and Government of Karnataka sharing will be 40:60 and 40:35, respectively.

5. The total State share required for the scheme will be Rs.3697.35 lakhs. During 2007-08, Rs.1358.25 lakhs has been provided under district sector scheme "Drip irrigation - special subsidy for horticulture crops" (2401-00-108-2-30) and Rs.650.00 lakhs has been provided under State sector scheme "Central Sector Scheme for Drip Irrigation" (2401-00-108-2-30). Together a total amount of Rs.2008.25 lakhs has been provided in the budget for 2007-08. Still Rs.1700.57 lakhs will be required towards State share. Finance Department has been moved to provide additionality {File No. ಕೃತೋಇ 125 ತೋಯೋಕಾ 2007(24469)}

6. During 2006-07, the scheme was implemented by providing 100% subsidy in Kolar and Bijapur districts and 75% subsidy in the remaining districts subjects to a limit of 2 hectares. Government of India releases its share directly to the implementing agency (IA) througgh Electronic Clerance System / Demand Draft to the Bank accounts of the Deputy Directors of Horticulture (ZP) of 27 districts. The State share released to ZP's is drawn by grant-in-aid bill and it will be deposited to the bank account of Micro Irrigation Mission at district level into which Government of India share has already been deposited. Together the funds are utilized for implementation of scheme by the Deputy Directors of Horticulture (ZP).

7. The matter of giving administratives approval to the said scheme during the year 2007-08 with the existing pattern of subsidy, procedures nd available budget has been discussed in detail with all Joint Directors of Horticulture, Additional Directors of Horticulture and Director of Horticulture on 12.7.2007 by the Secretary (Horticulture). Further, in the meeting held on 21.7.2007 with National Mission Director of National Horticulture Mission and Joint Secretary, Government of India, New Delhi regarding review of progress achieved in 6 districts coming under the Prime Minister's special package programme, National Mission Director assured to release balance of funds to State Government once the Utilization Certificate is submitted to Government of India. Accordingly, it was decided to issue administrative approval so that Government of India funds would be utilized faster.

Hence this order.

**Government Order No. AHD 125 HPP 2007, Bangalore, Dated: 26th July 2007**

Government is pleased to approve the Implementation of the "Drip Irrigation-special subsidy for horticulture crops" Head of Account 2401-00-108-2-30 as a district sector scheme during the year 2007-08. This will be implemented on Mission Mode.

2. The total outlay for the scheme will be Rs.7765.37 lakhs. Out of this, Rs.4068.02 lakhs will be the Central share and Rs.3697.35 lakhs will be the State share. The State share includes the State contribution to match the Government of India share and the State's commitment towards enhanced subsidy. The following are the components

| Sl. No. | Component | Sharing Pattern (Rs.in lakhs) | | |
|---|---|---|---|---|
| | | GOI | State | Total |
| 1. | Drip Irrigation | 3888.42 | 3662.51 | 7550.93 |
| 2. | Sprinkler Irrigation | 139.32 | 34.84 | 174.16 |
| | Sub Total | 4027.71 | 3697.35 | 7725.09 |
| 3. | Administrative **Cost@1%of** | 40.28 | | |
| | **Grand Total** | **4068.02** | **3697.35** | **7765.37** |

3. The subsidy under the scheme for 2007-08 will be as below;

a) **Drip Irrigation:** Subsidy will be provided at the rate of 75% all over the State and 100% in Bijapur and Kolar districts to all categories of farmers up to an extent of 2 hectares per beneficiary family. The subsidy will be 50% up to an extent between 2 ha. and 5 ha. as per Government of India guidelines.

b) **Sprinker Irrigation:** Subsidy will be prvided at the rate of 50% up to an extent of 5 ha. all over the State. However, Sprinkler Irrigation will be applicable only for those crops where drip irrigation is uneconomical.

4. The Director of Horticulture shall issue operational guidelines along with physical and financial targets for each district. He shall release corresponding State share to each district as and when Central Government releases the funds after confirming that the funds are accounted as outstanding balance available in the respective Bank Account.

5. The scheme will be implemented as per the operational guidlines of Micro Irrigation issued for the purpose along with the Administrative Approval for the scheme vide Government of India letter No.11-1/2007-Hort dated 25.4.2007, for the crops and other components approved as per Annual Action Plan for the State by the Executive Committee of Micro Irrigation Scheme and as per Government Order No.AHD 31 HPP 2006 dated 29.6.2006. The scheme implementation will be strictly as per the guidelines and subject to availability of funds.

By Order and in the name of the Governor of Karnataka,

P.R. 1413

**S. RAJU**

Under Secretary to Government,

Horticulture Department.

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀಮತಿ ಓ.ಮಾಲತಿ, ಸಹಾಯಕ ನಿರ್ದೇಶಕರು, ಸರಕು ಖರೀದಿ ಇಲಾಖೆ ಇವರ ಸೇವೆಯನ್ನು ಸಮಾಜ ಕಲ್ಯಾಣ ಇಲಾಖೆಯಲ್ಲಿ ವಿಲೀನಗೊಳಿಸಿ ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಪವಕನಿ/ಸಿಬ್ಬಂದಿ/ಸಿಆರ್/112/2003-04, ದಿನಾಂಕ:23.06.2004.
2. ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯ ಅರೆ ಸರ್ಕಾರಿ ಪತ್ರ ಸಂಖ್ಯೆ:ಪವಕನಿ/ಸಿಬ್ಬಂದಿ/ಸಿಆರ್/112/2003-04, ದಿನಾಂಕ: 03.12.2004.
3. ಸರ್ಕಾರದ ಅಧಿಸೂಚನೆ ಸಂಖ್ಯೆ:ಸಕಇ 160 ಬಿಇಟಿ 2005, ದಿನಾಂಕ: 16.04.2005.
4. ಅಧಿಸೂಚನೆ ಸಂಖ್ಯೆ:ಸಿಆಸುಇ 20 ಮನೇಕೋ 2004(ಭಾ) ದಿನಾಂಕ:30.04.2005.
5. ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಪವಕನಿ/ಸಿಬ್ಬಂದಿ/ಸಿಆರ್-3/2004-05, ದಿನಾಂಕ:28.11.2005.

**ಪ್ರಸ್ತಾವನೆ:**

ಶ್ರೀಮತಿ ಓ.ಮಾಲತಿ, ಸಹಾಯಕ ನಿರ್ದೇಶಕರು, ಸರಕು ಖರೀದಿ ಇಲಾಖೆ, ಬೆಂಗಳೂರು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಸದರಿ ಇಲಾಖೆಯು ಸಿಆಸು ಇಲಾಖೆಯು ಅನಧಿಕೃತ ಟಿಪ್ಪಣಿ ಸಂ.ಸಿಆಸುಇ 20 ಮನೇಕೋ 2004, ದಿನಾಂಕ:18.5.2004 ರಂದು ಸಮಾಪನಗೊಳಿಸಿರುವುದರಿಂದ, ಸದರಿಯವರ ಸೇವೆಯನ್ನು ಸಿಆಸು ಇಲಾಖೆಯ ರೀ-ಡಿಪ್ಲಾಯ್‌ಮೆಂಟ್ ಸೆಲ್‌ನ ವಶಕ್ಕೆ ನೀಡಲಾಗಿದ್ದು, ಸಿಆಸು ಇಲಾಖೆಯು ಸದರಿಯವರ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 16ರನ್ವಯ ಖಾಯಂ ವರ್ಗಾವಣೆ ಮಾಡಲು ಸಮಾಜ ಕಲ್ಯಾಣ ಇಲಾಖೆಗೆ ಕೋರಿರುತ್ತದೆ.

ಮೇಲೆ ಓದಲಾದ (1)ರ ದಿನಾಂಕ:23.06.2004ರ ಪತ್ರದಲ್ಲಿ ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ರವರು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ವೃಂದ ಮತ್ತು ನೇಮಕಾತಿ ನಿಯಮಗಳು ರಚನೆಯಾಗದೇ ಇರುವುದರಿಂದ ಸಹಾಯಕ ನಿರ್ದೇಶಕರ ಹುದ್ದೆಗೆ ತಾತ್ಕಾಲಿಕವಾಗಿ ನಿಯೋಜನೆ ಮೇರೆಗೆ ಸದರಿಯವರ ಸೇವೆಯನ್ನು ಪಡೆಯಬಹುದು ಎಂದು ತಿಳಿಸಿರುತ್ತಾರೆ. ಮುಂದುವರೆದು ನಿರ್ದೇಶಕರು ಮೇಲೆ ಓದಲಾದ (2)ರ ಪತ್ರದಲ್ಲಿ ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯದಲ್ಲಿ ಸಹಾಯಕ ನಿರ್ದೇಶಕರ ಹುದ್ದೆ ಶ್ರೇಣಿ ರೂ.7400-13120

ಸೃಜಿಸಲಾಗಿದ್ದು, ಪ್ರಸ್ತುತ ಸದರಿ ಹುದ್ದೆ ಖಾಲಿ ಇರುವುದರಿಂದ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 16ರನ್ವಯ ನೇಮಕ ಮಾಡಬಹುದು ಎಂದು ತಿಳಿಸಿರುತ್ತಾರೆ.

ಮೇಲೆ ಓದಲಾದ (3)ರ ಅಧಿಸೂಚನೆ ದಿನಾಂಕ:16.04.2005ರಲ್ಲಿ ಶ್ರೀಮತಿ ಓ.ಮಾಲತಿ, ಸಹಾಯಕ ನಿರ್ದೇಶಕರು (ಕಾಲಿಕ ವೇತನ ಶ್ರೇಣಿ ರೂ.7400-13120) ಇವರನ್ನು ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆಯಲ್ಲಿ ತೆರವಾಗಿದ್ದ ಸಹಾಯಕ ನಿರ್ದೇಶಕರ ಹುದ್ದೆಗೆ ನಿಯೋಜಿಸಲಾಗಿದೆ.

ಮೇಲೆ ಓದಲಾದ (4)ರ ಪತ್ರ ದಿನಾಂಕ:30.04.2005ರಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ಸದರಿಯವರನ್ನು ದಿನಾಂಕ:16.04.2005ರ ಅಧಿಸೂಚನೆಯಲ್ಲಿ ನಿಯೋಜನೆಯ ಮೇರೆಗೆ ನೇಮಿಸಲಾಗಿದೆ, ಆದರೆ ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಯ ನಿಯಮ 16ರಂತೆ ಖಾಯಂ ವರ್ಗಾವಣೆ ಮಾಡಲು ಕೋರಿರುತ್ತಾರೆ.

ಮೇಲೆ ಓದಲಾದ (5)ರ ಪತ್ರ ದಿನಾಂಕ:28.11.2005ರಲ್ಲಿ ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ರವರು ಶ್ರೀಮತಿ ಓ.ಮಾಲತಿ ಸಹಾಯಕ ನಿರ್ದೇಶಕರು, ಇವರನ್ನು ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯದಲ್ಲಿ ಖಾಲಿ ಇರುವ ಸಹಾಯಕ ನಿರ್ದೇಶಕರ ಹುದ್ದೆಗೆ ವೇತನ ಶ್ರೇಣಿ ರೂ.7400-13120 ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು (ಸಾಮಾನ್ಯ ನೇಮಕಾತಿ) ನಿಯಮ 16ರನ್ವಯ ಖಾಯಂ ಆಗಿ ನೇಮಕ ಮಾಡಲು ತಿಳಿಸಿದ್ದಾರೆ.

ಮೇಲಿನ ಅಂಶಗಳನ್ನು ಪರಿಶೀಲಿಸಿ ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ವೃಂದ ಮತ್ತು ನೇಮಕಾತಿ ನಿಯಮಗಳ ರಚನೆ ಇನ್ನೂ ಆಗಿಲ್ಲವಾದ ಕಾರಣ, ಸದರಿಯವರನ್ನು ಸಮಾಜ ಕಲ್ಯಾಣ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರ ಹುದ್ದೆಯಲ್ಲಿ ವಿಲೀನಗೊಳಿಸಿ, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಮುಂದುವರೆಸಬಹುದಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಕಇ 160 ಬಿಇಟಿ 2004, ಬೆಂಗಳೂರು, ದಿನಾಂಕ: 28ನೇ ಜುಲೈ 2007**

ಶ್ರೀಮತಿ ಓ.ಮಾಲತಿ, ಸಹಾಯಕ ನಿರ್ದೇಶಕರು, ಸರಕು ಖರೀದಿ ಇಲಾಖೆ ಹಾಲಿ ನಿಯೋಜನೆ ಮೇಲೆ ಸಹಾಯಕ ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ (ವೇತನ ಶ್ರೇಣಿ ರೂ.7400-13120) ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಇವರ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 16ರನ್ವಯ ಈ ಕೆಳಗಿನ ಷರತ್ತುಗಳಿಗೊಳಪಟ್ಟು ಸಹಾಯಕ ನಿರ್ದೇಶಕರು, ಸಮಾನಂತರ ಹುದ್ದೆಗೆ ಸಮಾಜ ಕಲ್ಯಾಣ ಇಲಾಖೆಯಲ್ಲಿ ವಿಲೀನಗೊಳಿಸಿ ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಮುಂದುವರೆಸಿ ಆದೇಶಿಸಲಾಗಿದೆ.

1) ಶ್ರೀಮತಿ ಓ.ಮಾಲತಿ ರವರು ಸರಕು ಖರೀದಿ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದು, ಆ ಹುದ್ದೆಯ ವೇತನ ಶ್ರೇಣಿ ರೂ. 7400-13120ಗಳಿದ್ದು, ಆ ಇಲಾಖೆಯು ಸಮಾಪನಗೊಂಡಿರುವುದರಿಂದ, ಹಾಗೂ ಹಾಲಿ ಇವರು ಪರಿಶಿಷ್ಟವರ್ಗಗಳ ಕಲ್ಯಾಣ ಇಲಾಖೆಯ ಕೇಂದ್ರ ಕಛೇರಿಯಲ್ಲಿ ಸಹಾಯಕ ನಿರ್ದೇಶಕರಾಗಿ ಕೆಲಸ ನಿರ್ವಹಿಸುತ್ತಿದ್ದು, ಈ ಇಲಾಖೆಗೆ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ರೂಪಿಸುವ ವಿಷಯ ಪರಿಶೀಲನೆಯಲ್ಲಿದ್ದು, ಇವರ ಸೇವೆಯನ್ನು ಸಹಾಯಕ ನಿರ್ದೇಶಕರು/ತತ್ಸಮಾನ ಹುದ್ದೆಯಲ್ಲಿ ಸಮಾಜ ಕಲ್ಯಾಣ ಇಲಾಖೆಯ ಸೇವೆಯಲ್ಲಿ ವಿಲೀನಗೊಳಿಸಿ ಇವರನ್ನು ಪರಿಶಿಷ್ಟವರ್ಗಗಳ ಕಲ್ಯಾಣ ಇಲಾಖೆಯ ಸಹಾಯಕ ನಿರ್ದೇಶಕರ/ತತ್ಸಮಾನ ಹುದ್ದೆಯಲ್ಲಿ ವೇತನ ಶ್ರೇಣಿ ರೂ.7400-13120ರಲ್ಲಿ ವಿಲೀನಗೊಳಿಸಿ ಹಾಲಿ ಅವರು ಪಡೆಯುತ್ತಿರುವ ವೇತನ ಶ್ರೇಣಿಯಲ್ಲಿ ವೇತನ ಸಂರಕ್ಷಣೆ ನೀಡಿ ನಿಗದಿಪಡಿಸಿದೆ.

2) ಸದರಿಯವರ ಜೇಷ್ಟತೆಯನ್ನು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಟತೆ) ನಿಯಮಗಳು, 1957ರ ನಿಯಮ 8ರ ಮೊದಲನೇ ಪರಂತುಕದ ಅನುಸಾರ ನೀಡತಕ್ಕದ್ದು.

ಇವರು ಪ್ರಸ್ತುತ ಪರಿಶಿಷ್ಟವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಸಹಾಯಕರ ಹುದ್ದೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದು, ಮುಂದಿನ ಆದೇಶದವರೆಗೆ ಇವರನ್ನು ಸದರಿ ಹುದ್ದೆಯಲ್ಲಿ ಮುಂದುವರೆಸಲಾಗಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಟಿಪ್ಪಣಿ ಸಂ.ಸಿಆಸುಇ 20 ಸೇನಿಡಿ 2007, ದಿನಾಂಕ:14.5.2007ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಂ. ಚಿದಾನಂದಸ್ವಾಮಿ**

ಪಿ.ಆರ್. 1446

ಸರ್ಕಾರದ ಅಧೀನ ಕಾರ್ಯದರ್ಶಿ-II,
ಸಮಾಜ ಕಲ್ಯಾಣ ಇಲಾಖೆ.

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ:** ಬೆಂಗಳೂರಿನಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಉಪನಿರ್ದೇಶಕರ ಹುದ್ದೆಯನ್ನು ಮುಂದುವರಿಸುವ ಬಗ್ಗೆ

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಸಂಕಇ 90 ಕೆಎಂಯು 2003 ದಿನಾಂಕ 5–9–2003.
ಸರ್ಕಾರಿ ಆದೇಶ ಸಂಖ್ಯೆ: ಸಂಕಇ 17 ಕೆಎಂಯು 2005 ದಿನಾಂಕ 2–3–2005.
ಸರ್ಕಾರಿ ಆದೇಶ ಸಂಖ್ಯೆ: ಸಂಕಇ 240 ಕೆಎಂಯು 2005 ದಿನಾಂಕ 14–11–2005.
ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ: ಡಿಎಎಂ:ಇಎಸ್‌ಟಿ:1:78:06–07 ದಿನಾಂಕ 15–12–2006.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ, ಬೆಂಗಳೂರಿನಲ್ಲಿರುವ ಸಹಾಯಕ ನಿರ್ದೇಶಕರ (ವಸ್ತು ಸಂಗ್ರಹಾಲಯಗಳ ಅಭಿವೃದ್ಧಿ) ಹುದ್ದೆಯನ್ನು ಒಂದು ವರ್ಷದ ಅವಧಿಗೆ ಉಪನಿರ್ದೇಶಕರ ಹುದ್ದೆಗೆ ಉನ್ನತೀಕರಿಸಿ ಆದೇಶಿಸಲಾಗಿದೆ. ಮೇಲಿನ ಕ್ರಮ ಸಂಖ್ಯೆ (2) ಮತ್ತು (3)ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಈ ಹುದ್ದೆಯನ್ನು ಕಾಲಕಾಲಕ್ಕೆ ಮುಂದುವರಿಸಿಕೊಂಡು ಬರಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರು ಈ ಹುದ್ದೆಯನ್ನು ದಿನಾಂಕ 5–9–2006ರಿಂದ ಮುಂದುವರಿಸಿ ಸರ್ಕಾರಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 11 ಕೆಎಂಯು 2007, ಬೆಂಗಳೂರು, ದಿನಾಂಕ: 26ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಬೆಂಗಳೂರಿನಲ್ಲಿರುವ ಉಪನಿರ್ದೇಶಕರ ಹುದ್ದೆಯನ್ನು ದಿನಾಂಕ 5–9–2006ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಿ ಆದೇಶಿಸಿದೆ. ಈ ಹುದ್ದೆಗೆ ಪರಿಷ್ಕೃತ ವೇತನ ಶ್ರೇಣಿಯಲ್ಲಿ, ನಿಯಮಾನುಸಾರ, ಲಭ್ಯವಾಗಬಹುದಾದ ವೇತನ, ಭತ್ಯೆ, ಇತ್ಯಾದಿಗಳು ಅನ್ವಯವಾಗುತ್ತವೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10–7–1996ರಲ್ಲಿ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ.ಆರ್. 1447 ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ತಿದ್ದೋಲೆ**

**ಸಂಖ್ಯೆ: ಕಸಂವಾಪ್ರ 152 ಕೆಎಂಯು 2007, ಬೆಂಗಳೂರು, ದಿನಾಂಕ: 2ನೇ ಆಗಸ್ಟ್ 2007**

ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 152 ಕೆಎಂಯು 2007 ದಿನಾಂಕ 30–6–2007ರಲ್ಲಿನ ಆದೇಶ ಭಾಗದ ಮೊದಲನೇ ಕಂಡಿಕೆಯನ್ನು 30–6–2007ರಿಂದಲೇ ಜಾರಿಗೆ ಬರುವಂತೆ ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

"ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ 2007–08ನೇ ಸಾಲಿಗೆ ಸಿಬ್ಬಂದಿ ವೇತನಕ್ಕಾಗಿ ನಿಗದಿಪಡಿಸಿರುವ ರೂ.26.00 ಲಕ್ಷಗಳಲ್ಲಿ ಮೊದಲನೇ ಕಂತಿನ ಅನುದಾನ ರೂ.8.00 ಲಕ್ಷಗಳನ್ನು (ರೂಪಾಯಿ ಎಂಟು ಲಕ್ಷಗಳು ಮಾತ್ರ) ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಬಿಡುಗಡೆ ಮಾಡಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ.ಆರ್. 1490 ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಚಿತ್ರದುರ್ಗ ಜಿಲ್ಲೆಯ ತುರುವನೂರು ಗ್ರಾಮದಲ್ಲಿ ನಿರ್ಮಿಸುತ್ತಿರುವ ವೀರಸೌಧ ಕಾಮಗಾರಿ ಪೂರ್ತಿಗೊಳಿಸಲು 5.00 ಲಕ್ಷ ರೂ.ಗಳನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 1 ವೀಸೌನಿ 2000 (ಭಾಗ) ದಿನಾಂಕ 30–12–2000
2. ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ ಸಂಖ್ಯೆ:ಕಸನಿ:15:ವೀರಸೌಧ: 2000–01 ದಿನಾಂಕ 24–5–2007

**ಪ್ರಸ್ತಾವನೆ:**

ಚಿತ್ರದುರ್ಗ ಜಿಲ್ಲೆ ತುರುವನೂರು ಗ್ರಾಮದಲ್ಲಿ ವೀರಸೌಧ ನಿರ್ಮಿಸುವ ಸಲುವಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ 30–12–2000ರ ಸರ್ಕಾರಿ ಆದೇಶದಲ್ಲಿ 10.00 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಲಾಗಿದೆ. ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ 24–5–2007ರ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಚಿತ್ರದುರ್ಗದ ಸಹಾಯಕ ನಿರ್ದೇಶಕರು ಸ್ಥಳ ತಪಾಸಣೆ ನಡೆಸಿ ಪರಿಶೀಲಿಸಿದ ಮೇರೆಗೆ ಶೇಕಡ 70ರಷ್ಟು ಕಾಮಗಾರಿ ಮುಗಿದಿದ್ದು ಉಳಿದ ಶೇಕಡ 30ರಷ್ಟು ಕಾಮಗಾರಿಯನ್ನು ಮುಕ್ತಾಯಗೊಳಿಸುವ ಸಲುವಾಗಿ 5.00 ಲಕ್ಷ ರೂ.ಗಳನ್ನು ಬಿಡುಗಡೆ ಮಾಡುವಂತೆ ಕೋರಿ ಲೋಕೋಪಯೋಗಿ ಇಲಾಖೆಯ ಎಕ್ಸಿಕ್ಯೂಟೀವ್ ಇಂಜಿನಿಯರ್ ಅವರಿಂದ ಅಂದಾಜು ಪಟ್ಟಿ ಇತ್ಯಾದಿಗಳನ್ನು ಪಡೆದು ಕಳುಹಿಸಿ 5.00 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಲು ಕೋರಿದ್ದಾರೆ. ಅದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 5 ವಿಸೌನಿ 2003, ಬೆಂಗಳೂರು, ದಿನಾಂಕ: 08ನೇ ಆಗಸ್ಟ್ 2007**

ಚಿತ್ರದುರ್ಗ ಜಿಲ್ಲೆಯ ತುರುವನೂರು ಗ್ರಾಮದಲ್ಲಿ ನಿರ್ಮಾಣದ ಹಂತದಲ್ಲಿರುವ ವೀರಸೌಧ ನಿರ್ಮಾಣದ ಉಳಿದ ಕಾಮಗಾರಿಯನ್ನು ಕೈಗೊಳ್ಳುವ ಸಲುವಾಗಿ ರೂ.5.00 ಲಕ್ಷಗಳನ್ನು ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಅವರಿಗೆ ಈ ಕೆಳಕಂಡ ಷರತ್ತಿಗೆ ಒಳಪಟ್ಟು ಬಿಡುಗಡೆ ಮಾಡಲು ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಹಣವನ್ನು ಯಾವ ಉದ್ದೇಶಕ್ಕಾಗಿ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಖರ್ಚು ಮಾಡತಕ್ಕದ್ದು.

ಹಣ ಬಳಕೆಯ ಬಗ್ಗೆ ಉಪಯೋಗತಾ ಪತ್ರವನ್ನು ಸಕಾಲದಲ್ಲಿ ತಪ್ಪದೆ ಸಲ್ಲಿಸತಕ್ಕದ್ದು.

ಈ ಕಾಮಗಾರಿಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 4202–04–800–1–01 (ಯೋಜನೆ) 139 ಜಿಲ್ಲಾ ರಂಗಮಂದಿರ ನಿರ್ಮಾಣ ಇದರ ಅಡಿಯಲ್ಲಿ ಭರಿಸತಕ್ಕದ್ದು.

ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಅವರ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಶಿಇ 495 ಐಎಫ್‌ಬಿಎ 2007 ದಿನಾಂಕ 7–7–2007ರಂದು ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

ಪಿ.ಆರ್. 1491

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಎಂ. ಪ್ರಕಾಶಾಚಾರಿ (ಸಂಖ್ಯಾತಿರಿಕ್ತ) ರೇಷ್ಮೆ ಪ್ರವರ್ತಕರು ಇವರು ಸಲ್ಲಿಸಿರುವ ಮೇಲ್ಮನವಿ ಬಗ್ಗೆ.

**ಓದಲಾಗಿದೆ:**
1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಆದೇಶ ಸಂಖ್ಯೆ: ಸಿ3/ಶಿಸ್ತು/ರೇಪ್ರವ/21/2003-04, ದಿನಾಂಕ: 23-8-2005.
2. ಶ್ರೀ ಎಂ. ಪ್ರಕಾಶಾಚಾರಿ (ಸಂ) ಇವರ ಮೇಲ್ಮನವಿ ದಿನಾಂಕ: 29-9-2005.
3. ರೇಷ್ಮೆ ಆಯುಕ್ತರಿಗೆ ಬರೆದ ಸಮಸಂಖ್ಯೆಯ ಪತ್ರ ದಿನಾಂಕ: 22-10-2005.
4. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸಿ3/ಶಿಸ್ತು/ಮೇಲ್ಮನವಿ/14/2005-06, ದಿನಾಂಕ: 29-12-2005.

**ಪ್ರಸ್ತಾವನೆ:**

ಶ್ರೀ ಎಂ. ಪ್ರಕಾಶಾಚಾರಿ,(ಸಂಖ್ಯಾತಿರಿಕ್ತ) ರೇಷ್ಮೆ ಪ್ರವರ್ತಕರು ಇವರು ವಿಜಯಪುರ ರೇಷ್ಮೆ ಗೂಡಿನ ಮಾರುಕಟ್ಟೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಎಸಗಿದ್ದ ದುರ್ನಡತೆಗಳ ಕುರಿತಂತೆ ಸಿಸಿಎ ನಿಯಮ 11ರಡಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಿ, ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರಿಗಳಾದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಸಹಿತವಾಗಿ ತಡೆಹಿಡಿಯುವ ದಂಡನೆ ಮತ್ತು ಸದರಿಯವರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತಿನ ಅವಧಿ ಎಂದು ಪರಿಗಣಿಸಿ ಆದೇಶಿಸಿರುತ್ತಾರೆ. ಸದರಿ ದಂಡನೆ ಆದೇಶದ ವಿರುದ್ಧ ನೌಕರರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಸರ್ಕಾರಕ್ಕೆ ಮೇಲ್ಮನವಿ ಸಲ್ಲಿಸಿ, ರೇಷ್ಮೆ ಆಯುಕ್ತರು ದಂಡನೆ ವಿಧಿಸಿ ಹೊರಡಿಸಿರುವ ದಂಡನೆ ಆದೇಶವನ್ನು ರದ್ದುಪಡಿಸಿ ಶಿಸ್ತು ಪ್ರಾಧಿಕಾರವು ನೀಡಿರುವ ಘೋರ ದಂಡನೆಯನ್ನು ರದ್ದುಗೊಳಿಸಲು ನಿರ್ದೇಶಿಸಿ, ಅಮಾನತ್ತು ಅವಧಿಯನ್ನು ಕರ್ತವ್ಯದ ಅವಧಿಯೆಂದು ಘೋಷಿಸುವಂತೆ ಕೋರಿದ್ದಾರೆ. ಈ ಕೆಳಗಿನ ಅಂಶಗಳ ಹಿನ್ನಲೆಯಲ್ಲಿ ಶಿಸ್ತು ಪ್ರಾಧಿಕಾರದ ಆದೇಶವನ್ನು ರದ್ದುಪಡಿಸುವಂತೆ ಮೇಲ್ಮನವಿಯಲ್ಲಿ ಕೋರಿರುತ್ತಾರೆ. ದಂಡಿತ ನೌಕರರ ಮೇಲಿನ 3 ಆರೋಪಗಳಿಗೆ ಕುರಿತಂತೆ ಅವರು ನೀಡಿರುವ ವಿವರಣೆಯು ಈ ಕೆಳಗಿನಂತಿದೆ.

**ಆರೋಪ 1:-** ನಾನು ವಿಜಯಪುರ ಸರ್ಕಾರಿ ರೇಷ್ಮೆಗೂಡಿನ ಮಾರುಕಟ್ಟೆಯ ಘಟಕ ಒಂದರ ನಗದು ಕೌಂಟರ್‌ನಲ್ಲಿ ದಿ: 16-1-2004 ರಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಮಧ್ಯಾಹ್ನ 1-00 ಗಂಟೆಯ ಸಮಯದಲ್ಲಿ ಇಬ್ಬರು ರೇಷ್ಮೆ ಬೆಳೆಗಾರರಿಗೆ ಒಟ್ಟು ರೂ. 9553/- ನ್ನು ಪಾವತಿ ಮಾಡಿದ್ದು, ಈ ಹಣವು ಯಾವ ಮೂಲದಿಂದ ಬಂದಿತೆಂಬ ಬಗ್ಗೆ ಸಂಬಂಧಪಟ್ಟ ರಿಜಿಸ್ಟರ್‌ನಲ್ಲಿ ದಾಖಲಿಸಿರುವುದಿಲ್ಲ. ಈ ಹಣವನ್ನು ನಾನೇ ಸ್ವಂತ ಬರೆಸಿ ಸ್ವಹಿತಾಸಕ್ತಿಯಿಂದ ಕಾರ್ಯ ನಿರ್ವಹಿಸಿರುವುದಾಗಿ ಆರೋಪಿಸಲಾಗಿದೆ. - ಈ ಆರೋಪಕ್ಕೆ ಸಂಬಂಧಪಟ್ಟಂತೆ ವಿಚಾರಣಾ ಸಮಯದಲ್ಲಿ ಸಾಕ್ಷಿ ಹಾಗೂ ದಾಖಲೆಗಳ ನಮೂದುಗಳ ಆಧಾರದ ಮೇಲೆ ಯಾವ ಮೂಲದಿಂದ ಹಣವನ್ನು ಪಡೆಯಲಾಗಿತ್ತು ಹಾಗೂ ಯಾವ ರೇಷ್ಮೆ ಬೆಳೆಗಾರರಿಗೆ ಹಣ ಸಂದಾಯ ಮಾಡಲಾಗಿತ್ತು ಎಂಬುದನ್ನು ನನ್ನ ದಿ: 20-7-2005ರ ಲಿಖಿತ ಹೇಳಿಕೆಯಲ್ಲಿ ಶಿಸ್ತು ಪ್ರಾಧಿಕಾರಕ್ಕೆ ಮನವಿ ಮಾಡಿರುತ್ತೇನೆ. ಗೂಡು ಖರೀದಿಸಿದವರು ಹಣ ಜಮಾ ಮಾಡಿದ ನಂತರ ಮಾರಾಟ ಮಾಡಿದ ರೇಷ್ಮೆ ಬೆಳೆಗಾರರಿಗೆ ಹಣ ಪಾವತಿ ಮಾಡಲಾಗಿದೆ. ಇದನ್ನು ಈ ವಿಚಾರಣೆ ಸಮಯದಲ್ಲಿ ಒದಗಿಸಿರುವ ಆರೋಪ ಪರ ಪ್ರದರ್ಶಿತ ದಾಖಲೆ ಹಾಗೂ ಸಾಕ್ಷಿ ದೃಢಪಡಿಸಿರುತ್ತದೆ. ಈ ಆರೋಪವು ಸೃಷ್ಟಿಸಿದ ಆರೋಪವಾಗಿದ್ದು, ನೈಜತೆಯಿಂದ ಕೂಡಿರುವುದಿಲ್ಲ. ಸಾಕ್ಷಿಗಳಲ್ಲಿ ಒಬ್ಬರನ್ನು ಹೊರತುಪಡಿಸಿ ಉಳಿದ ಸಾಕ್ಷಿದಾರರು ತಮಗೆ ಏನೂ ತಿಳಿದಿಲ್ಲವೆಂದು ಹೇಳಿರುತ್ತಾರೆ. ಆದ್ದರಿಂದ ಈ ಆರೋಪವನ್ನು ಮುಕ್ತಗೊಳಿಸುವಂತೆ ಕೋರಿರುತ್ತಾರೆ.

**ಆರೋಪ-2 :-** ಈ ಆರೋಪದಲ್ಲಿ ವಿಜಯಪುರ ಸರ್ಕಾರಿ ರೇಷ್ಮೆಗೂಡಿನ ಮಾರುಕಟ್ಟೆಯ ಘಟಕ ಒಂದರ ನಗದು ಕೌಂಟರ್ ನಲ್ಲಿ ದಿ: 16-1-2004 ರಲ್ಲಿ ಕಾರ್ಯನಿರ್ವಹಿಸುತ್ತಿದ್ದು ಮಧ್ಯಾಹ್ನ 1-00 ಗಂಟೆಯ ಸಮಯದಲ್ಲಿ

ಕ್ಯಾಷ್‌ಕೌಂಟರ್‌ನಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ರೇಷ್ಮೆ ಕಾನೂನು ಜಾರಿ ವಿಭಾಗದ ಅಧಿಕಾರಿಗಳು ತಪಾಸಣೆ ಮಾಡಲು ಬಂದಾ ಅವರೊಂದಿಗೆ ಅಸಭ್ಯವಾಗಿ ವರ್ತಿಸಿ ಅವರ ಎದುರಿನಲ್ಲೇ ದಾಖಲೆಗಳನ್ನು ನಾಶ ಪಡಿಸಿರುವುದಾಗಿ ಆರೋಪಿಸಲಾಗಿದೆ - ಈ ಆರೋಪಕ್ಕೆ ಸಂಬಂಧಿಸಿದಂತೆ ರೇಷ್ಮೆ ಸಹಾಯಕ ನಿರ್ದೇಶಕರನ್ನು ಹೊರತುಪಡಿಸಿ, ಉಳಿದ ಸಾಕ್ಷಿದಾರರು ತಮಗೆ ಮಾಹಿತಿ ಇಲ್ಲವೆಂದು ತಿಳಿಸಿರುತ್ತಾರೆ. ಇದರಿಂದ ಇದು ಸೃಷ್ಟಿಸಿದ ಆರೋಪವೆಂದು ದೃಢಪಡುತ್ತದೆ. ದಾಖಲೆಗಳನ್ನು ಹರಿದು ಹಾಕಲು ಪ್ರಯತ್ನಿಸಿದ ಬಗ್ಗೆ ಹೇಳಿಕೆ ನೀಡಿದ್ದು, ಇದಕ್ಕೆ ಪೂರಕವಾಗಿ ಬಿಳಿ ಹಾಳೆ ಹಾಜರುಪಡಿಸಿದ್ದು, ಅದು ತಾನು ಲೆಕ್ಕಾಚಾರ ತಾಳೆ ನೋಡಲು ಇಟ್ಟುಕೊಂಡಿದ್ದ ಹಾಳೆಯೆಂದು ತಪಾಸಣೆ ಸಮಯದಲ್ಲಿ ಈ ಚೀಟಿಯನ್ನು ತನ್ನ ಕೈಯಿಂದ ಬಲವಂತವಾಗಿ ಕಸಿದ ಪರಿಣಾಮ ಹರಿದುಹೋಗಿರುವುದಾಗಿ, ಬಿಳಿ ಹಾಳೆಯಲ್ಲಿ ಬರೆದ ದಾಖಲೆಗಳು ಸರ್ಕಾರಿ ದಾಖಲೆಗಳಲ್ಲ. ತಾತ್ಕಾಲಿಕವಾಗಿ ದಿನದ ಲೆಕ್ಕಚಾರ ತಾಳೆನೋಡಲು ತಾನು ನಿರ್ವಹಿಸಿದ ತಾತ್ಕಾಲಿಕ ಪಟ್ಟಿಯಾಗಿರುತ್ತದೆ. ತಪಾಸಣೆ ಸಮಯದಲ್ಲಿ ಅದನ್ನು ಸಹ ಪರಿಶೀಲಿಸಲಾಗಿದೆ. ತಾನು ಯಾವುದೇ ಅಧಿಕೃತ ದಾಖಲೆಗಳನ್ನು ನೀಡದೆ ತಪಾಸಣೆಗೆ ಅಡ್ಡಿಪಡಿಸಿರುವುದಿಲ್ಲ. ಸರ್ಕಾರಿ ದಾಖಲೆಗಳನ್ನು ನಾಶಪಡಿಸಲು ಪ್ರಯತ್ನಿಸಿದೆ ಎಂದು ಆರೋಪಿಸಿ ತನ್ನ ತೇಜೋವಧೆ ಮಾಡಲಾಗಿದೆ. ಹರಿದ ದಾಖಲೆ ಏನು ಎಂಬುದನ್ನು ಪರಾಮರ್ಶಿಸಿ ಆರೋಪದಿಂದ ಮುಕ್ತ ಮಾಡಲು ಕೋರಲಾಗಿದೆ.

**ಆರೋಪ-3 :-** ಈ ಆರೋಪದಲ್ಲಿ ವಿಜಯಪುರ ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆಯ ಘಟಕ ಒಂದರ ನಗದು ಕೌಂಟರ್‌ನಲ್ಲಿ ದಿನಾಂಕ: 16-1-2004 ರಲ್ಲಿ ಕಾರ್ಯ ನಿರ್ವಹಿಸುತ್ತಿದ್ದು ಮಧ್ಯಾಹ್ನ 1-00 ಗಂಟೆಯ ಸಮಯದಲ್ಲಿ ನಿರ್ವಹಿಸುತ್ತಿದ್ದ ಕೆಲಸವನ್ನು ಸ್ಥಗಿತಗೊಳಿಸಿ ತಪಾಸಣಾಧಿಕಾರಿಗಳು ವಿರುದ್ಧ ಪ್ರಚೋದಾತ್ಮಕ ಹೇಳಿಕೆ ನೀಡಿ ಸರ್ಕಾರಿ ಕಾರ್ಯನಿರ್ವಹಣೆಗಾಗಿ ಅಡ್ಡಿ ಉಂಟು ಮಾಡಲು ನಾನು ಯತ್ನಿಸಿರುತ್ತೇನೆಂದು ಆರೋಪಿಸಲಾಗಿದೆ. - ವಿಜಯಪುರ ರೇಷ್ಮೆಗೂಡು ಮಾರುಕಟ್ಟೆಯ ಕೌಂಟರ್ ಎದುರು ತಪಾಸಣೆಗೆ ಬಂದಾಗ ರೇಷ್ಮೆ ಬೆಳೆಗಾರರು ಗಲಾಟೆ ಮಾಡಲು ತಾನು ಪ್ರಚೋದಿಸಿರುವುದಾಗಿ ವಾಹನ ಚಾಲಕರು ಹೇಳಿದರೆಂದು ಶ್ರೀ ಟಿ.ಹೆಚ್. ಬೈರಪ್ಪ ಸಾಕ್ಷ್ಯ ನುಡಿದಿದ್ದು, ಅವರು ಪ್ರತ್ಯಕ್ಷ ಸಾಕ್ಷಿ ಅಲ್ಲವಾದ್ದರಿಂದ ಇದು ಊಹೆಯಿಂದ ಕೂಡಿದ ಹೇಳಿಕೆಯಾಗಿದೆ. ತನ್ನ ಕೌಂಟರನ್ನು ಸಂಪೂರ್ಣವಾಗಿ ಪರಿಶೀಲಿಸಿದ್ದು, ತನಿಖೆ ಅಪೂರ್ಣವಲ್ಲವೆಂಬುದನ್ನು ಅವರೇ ಒಪ್ಪಿಕೊಂಡಿರುತ್ತಾರೆ. ಉಳಿದ ಯಾವುದೇ ಸಾಕ್ಷಿದಾರರು, ರೇಷ್ಮೆಬೆಳೆಗಾರರು ಪ್ರಚೋದಿತ ಹೇಳಿಕೆಗಳನ್ನು ನೀಡಲು ತಾನು ಕಾರಣನೆಂದು ಸಾಕ್ಷಿ ನೀಡದೇ ಇರುವುದರಿಂದ ಆರೋಪವು ಸುಳ್ಳು ಎಂದು ದೃಢಪಡುತ್ತದೆ. ಈ ಘಟನೆ ನಡೆದ ಕೌಂಟರ್‌ಗೂ ತಾನು ಕಾರ್ಯನಿರ್ವಹಿಸುತ್ತಿದ್ದ ಕೌಂಟರ್‌ಗೂ ಬಹಳ ಅಂತರವಿದ್ದು, ಈ ಘಟನೆಗೆ ತಾನು ಕಾರಣಕರ್ತನಲ್ಲ. ತನ್ನ ವಿರುದ್ಧ ಉದ್ದೇಶಪೂರ್ವಕವಾಗಿ ಈ ಆರೋಪ ಮಾಡಲಾಗಿದೆ. ಆದ್ದರಿಂದ ಈ ಆರೋಪದಿಂದಲೂ ಮುಕ್ತಗೊಳಿಸುವಂತೆ ಕೋರಿರುತ್ತಾರೆ.

(2) ಅರ್ಜಿದಾರರು ಮೇಲ್ಮನವಿಯಲ್ಲಿ ಹೇಳಿರುವ ಅಂಶಗಳಿಗೆ ಕುರಿತಂತೆ ಮೇಲೆ ಓದಲಾದ ಕ್ರಮಸಂಖ್ಯೆ (3)ರ ಪತ್ರದಲ್ಲಿ ರೇಷ್ಮೆ ಆಯುಕ್ತರಿಂದ ವರದಿಯನ್ನು ಕೋರಲಾಯಿತು. ಮೇಲೆ ಓದಲಾದ ಕ್ರಮಸಂಖ್ಯೆ (4)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ವಿವರವಾದ ವರದಿಯನ್ನು ಒದಗಿಸಿರುತ್ತಾರೆ. ಪ್ರಕರಣಕ್ಕೆ ಕುರಿತಂತೆ ನೌಕರರು ಸಲ್ಲಿಸಿರುವ ಮೇಲ್ಮನವಿಯನ್ನು ಈ ಕುರಿತಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರಿಂದ ಪಡೆದಿರುವ ವರದಿಯ ಹಿನ್ನಲೆಯಲ್ಲಿ ವಿಷಯವನ್ನು ಸಮಗ್ರವಾಗಿ ಪರಿಶೀಲಿಸಲಾಯಿತು. ದಂಡಿತ ನೌಕರರು ಸರ್ಕಾರಿ ಕಾರ್ಯನಿರ್ವಹಣೆಯಲ್ಲಿ ದುರ್ನಡತೆ ಎಸಗಿರುವ ಆರೋಪಗಳು ಇಲಾಖಾ ವಿಚಾರಣೆ ಸಮಯದಲ್ಲಿ ಸಾಬೀತಾಗಿದ್ದು, ವಿಚಾರಣೆಯಲ್ಲಿ ಎಲ್ಲಾ ದಾಖಲಾತಿ ಮತ್ತು ಸಾಕ್ಷ್ಯಗಳ ಹೇಳಿಕೆಯನ್ನು ಪಡೆದು ಪರಿಶೀಲಿಸಲಾಗಿದೆ. ದಂಡಿತ ನೌಕರರು ಆರೋಪವನ್ನು ನಿರಾಕರಿಸುವಲ್ಲಿ ಯಾವುದೇ ದಾಖಲೆಗಳನ್ನು ಹಾಜರುಪಡಿಸುವಲ್ಲಿ ವಿಫಲರಾಗಿರುತ್ತಾರೆ. ಆರೋಪವನ್ನು ಅಲ್ಲಗಳೆಯುವ ನಿಟ್ಟಿನಲ್ಲಿ ಯಾವುದೇ ದಾಖಲಾತಿಗಳನ್ನು ಮೇಲ್ಮನವಿಯೊಂದಿಗೆ ಸಲ್ಲಿಸಿರುವುದಿಲ್ಲ. ಈ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ದಂಡಿತ ನೌಕರರು ಸಲ್ಲಿಸಿರುವ ಮೇಲ್ಮನವಿಯನ್ನು ತಿರಸ್ಕರಿಸಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 203 ರೇಇವಿ 2005, ಬೆಂಗಳೂರು, ದಿನಾಂಕ: 28-5-2006.**

ಕಂಡಿಕೆ-2 ರಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಎಂ. ಪ್ರಕಾಶಾಚಾರಿ, ರೇಷ್ಮೆ ಪ್ರವರ್ತಕರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ. ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ಮತ್ತು ನಿಯಂತ್ರಣ) ನಿಯಮಗಳು 1957ರ ನಿಯಮ 25 ರ (2) ನೇ ಉಪನಿಯಮದ (ಸಿ) ರನ್ವಯ ಶಿಸ್ತು ಪ್ರಾಧಿಕಾರ ದಂಡನೆ ವಿಧಿಸಿ ಹೊರಡಿಸಿರುವ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಆದೇಶ ಸಂಖ್ಯೆ: ಸಿ3/ಶಿಸ್ತು/ರೇಪ್ರವ/21/2003-04, ದಿನಾಂಕ: 23-8-2005 ಅನ್ನು ಸ್ಥಿರೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭಾರತಿ ಆರ್. ನಾಯಕ್**

ಪಿ.ಆರ್. 1455

ಪೀಠಾಧಿಕಾರಿ(ರೇಷ್ಮೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಕೋಲಾರ ಜಿಲ್ಲೆ ಶ್ರೀನಿವಾಸಪುರ ತಾಲ್ಲೂಕಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ(ದ), ಬೆಂಗಳೂರು ಇವರ ಪತ್ರ ಸಂ: ಮುಇಂ:ಸಂಕದ:ಎಇ6: ಮೇಲ್ದರ್ಜೆ: ಎಂಡಿಆರ್:2007-08 ದಿನಾಂಕ: 23.7.2007.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ(ದ) ಬೆಂಗಳೂರು ಇವರು ಕೋಲಾರ ಜಿಲ್ಲೆ ಶ್ರೀನಿವಾಸಪುರ ತಾಲ್ಲೂಕಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆ ಸಲ್ಲಿಸಿದ್ದಾರೆ. ಸದರಿ ಗ್ರಾಮೀಣ ರಸ್ತೆಗಳು ತುಂಬಾ ದುಸ್ಥಿತಿಯಲ್ಲಿದ್ದು, ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದುದರಿಂದ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಸಾರ್ವಜನಿಕರ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ. ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ(ದ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರ. ಸಂ. | ಗ್ರಾಮೀಣ ರಸ್ತೆಗಳ ವಿವರ | ಉದ್ದ ಕಿಮೀ |
|---|---|---|
| 1. | ಆರ್.ಎಲ್. ರಸ್ತೆಯಿಂದ ಎಸ್.ಪಿ. ರಸ್ತೆ ವಯಾ ರೋಣೂರು ದಿಂಬಾಲ, ಕೊಟ್ರಗುಳಿ ಇಮರಕುಂಟೆ | 9.00 |
| 2. | ಆರ್.ಜಿ.ಆರ್. ರಸ್ತೆಯಿಂದ ಎಲ್.ಪಿ. ರಸ್ತೆ ವಯಾ ತಿಮ್ಮನಹಳ್ಳಿ, ಪಚ್ಚಲಮಾಕಲಹಳ್ಳಿ | 12.00 |
| 3. | ಕೊತ್ತಪಲ್ಲಿ ಮಾಸ್ತಿ ರಸ್ತೆಯಿಂದ ಎಂ.ಜಿ. ರಸ್ತೆ ವಯಾ ಪಾಳ್ಯ ನಂಬಿಹಳ್ಳಿ, ದ್ವಾರಸಂದ್ರ, ಸಾತಂಡಹಳ್ಳಿ, ಕಟಾರಮುದ್ದಲಪಲ್ಲಿ ಪಾತಪಲ್ಲಿ | 18.50 |
| 4. | ಎಂ.ಜಿ. ರಸ್ತೆಯಿಂದ ನಾಗನಾಥೇಶ್ವರ ದೇವಸ್ಥಾನ ವಯಾ ಯಲ್ದೂರು, ಚಿನ್ನಪಲ್ಲಿ, ಅಗರಂ. | 10.60 |
| | **ಒಟ್ಟು** | **50.10** |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 377 ಸಿಆರ್‌ಎಂ 2007, ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ. ಸಂ. | ಗ್ರಾಮೀಣ ರಸ್ತೆಗಳ ವಿವರ | ಉದ್ದ ಕಿಮೀ |
|---|---|---|
| 1. | ಆರ್.ಎಲ್. ರಸ್ತೆಯಿಂದ ಎಸ್.ಪಿ. ರಸ್ತೆ ವಯಾ ರೋಣೂರು ದಿಂಬಾಲ, ಕೊಟ್ರಗುಳಿ ಇಮರಕುಂಟೆ | 9.00 |
| 2. | ಆರ್.ಜಿ.ಆರ್. ರಸ್ತೆಯಿಂದ ಎಲ್.ಪಿ. ರಸ್ತೆ ವಯಾ ತಿಮ್ಮನಹಳ್ಳಿ, ಪಚ್ಚಲಮಾಕಲಹಳ್ಳಿ | 12.00 |
| 3. | ಕೊತ್ತಪಲ್ಲಿ ಮಾಸ್ತಿ ರಸ್ತೆಯಿಂದ ಎಂ.ಜಿ. ರಸ್ತೆ ವಯಾ ಪಾಳ್ಯ ನಂಬಿಹಳ್ಳಿ, ದ್ವಾರಸಂದ್ರ, ಸಾತಂಡಹಳ್ಳಿ, ಕಟಾರಮುದ್ದಲಪಲ್ಲಿ ಪಾತಪಲ್ಲಿ | 18.50 |
| 4. | ಎಂ.ಜಿ. ರಸ್ತೆಯಿಂದ ನಾಗನಾಥೇಶ್ವರ ದೇವಸ್ಥಾನ ವಯಾ ಯಲ್ದೂರು, ಚಿನ್ನಪಲ್ಲಿ, ಅಗರಂ. | 10.60 |
| | **ಒಟ್ಟು** | **50.10** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ).

ಪಿ.ಆರ್. 1467

## ಶಿಕ್ಷಣ ಸಚಿವಾಲಯ

**ವಿಷಯ:** ಅಸ್ತಿತ್ವದಲ್ಲಿರುವ ಇಂಜಿನಿಯರಿಂಗ್ / ಮ್ಯಾನೇಜ್‌ಮೆಂಟ್ ಕಾಲೇಜುಗಳ ನೂತನ ಕೋರ್ಸುಗಳ ಪ್ರಾರಂಭಕ್ಕೆ ಹಾಗೂ ವಿದ್ಯಾರ್ಥಿ ಪ್ರಮಾಣದ ಹೆಚ್ಚಳದ ಪರಿಶೀಲನೆಗಾಗಿ ತಜ್ಞರ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಇಡಿ 138 ಟೆಇಸಿ 2002 ದಿ:13.12.2002.
2. ಸರ್ಕಾರದ ಆದೇಶ ಸಂಖ್ಯೆ: ಇಡಿ 227 ಟೆಇಸಿ 2004 ದಿ:30.10.2004.
3. ಸರ್ಕಾರದ ಆದೇಶ ಸಂಖ್ಯೆ: ಇಡಿ 15 ಟೆಇಸಿ 2006 ದಿ:04.02.2006.
4. ಸರ್ಕಾರದ ಆದೇಶ ಸಂಖ್ಯೆ: ಇಡಿ 214 ಟೆಇಸಿ 2006 ದಿ:17.11.2006.

**ಪ್ರಸ್ತಾವನೆ:**

ಮೇಲೆ (1) ರಿಂದ (4)ರವರೆಗೆ ಓದಲಾದ ಆದೇಶಗಳಲ್ಲಿ ಹೊಸ ಇಂಜಿನಿಯರಿಂಗ್, ಎಂ.ಬಿ.ಎ. / ಎಂ.ಸಿ.ಎ. ಕಾಲೇಜುಗಳ ಸ್ಥಾಪನೆ, ಹಾಲಿ ಇರುವ ಕಾಲೇಜುಗಳಲ್ಲಿ ಇನ್‌ಟೇಕ್ ಬದಲಾವಣೆ, ಇವುಗಳ ಬಗ್ಗೆ ಬಂದ ಅರ್ಜಿಗಳನ್ನು ತಪಾಸಣೆ ನಡೆಸಿ ಸರ್ಕಾರಕ್ಕೆ ಖಚಿತ ಶಿಫಾರಸ್ಸಿನೊಂದಿಗೆ ವರದಿ ಸಲ್ಲಿಸಲು ಸಮಿತಿಯನ್ನು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ರಚಿಸಲಾಗಿರುತ್ತದೆ. ಈ ಸಮಿತಿಗಳನ್ನು ಕಾಲಕಾಲಕ್ಕೆ ಪುನರ್ ರಚಿಸಲಾಗಿದ್ದು ಈಗ ಉಲ್ಲೇಖ (4)ರ ಆದೇಶದಲ್ಲಿ ರಚಿಸಲಾಗಿದ್ದ ಸಮಿತಿಯು ಅಸ್ತಿತ್ವದಲ್ಲಿರುತ್ತದೆ. ಈ ವಿಷಯವನ್ನು ಸರ್ಕಾರವು ಪುನರ್ ಪರಿಶೀಲಿಸಿದೆ. ರಾಜ್ಯದಲ್ಲಿ ಅಸ್ತಿತ್ವದಲ್ಲಿರುವ ಇಂಜಿನಿಯರಿಂಗ್ ಕಾಲೇಜುಗಳ ಹೊಸ ಕೋರ್ಸುಗಳ ಪ್ರಾರಂಭ ಹಾಗೂ ವಿದ್ಯಾರ್ಥಿ ಪ್ರಮಾಣದ ಹೆಚ್ಚಳ ಇಂತಹ ಅರ್ಜಿಗಳನ್ನು ಪರಿವೀಕ್ಷಿಸಲು ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯದ ಅಧೀನದಲ್ಲಿರುವ ತಜ್ಞರ ಸಮಿತಿಯು ಕೂಡ ಪರಿವೀಕ್ಷಣೆ ನಡೆಸಿ ವರದಿ ಸಲ್ಲಿಸುತ್ತಿರುವುದರಿಂದ ಅಸ್ತಿತ್ವದಲ್ಲಿರುವ ಇಂಜಿನಿಯರಿಂಗ್ ಕಾಲೇಜುಗಳಲ್ಲಿನ ವಿದ್ಯಾರ್ಥಿ ಪ್ರಮಾಣದ ಹೆಚ್ಚಳದ ಬಗ್ಗೆ ಬಂದ ಅರ್ಜಿಗಳನ್ನು

ಪರಿಶೀಲಿಸಲು ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯದ ತಜ್ಞರ ಸಮಿತಿಯ ಪರಿವೀಕ್ಷಣೆಯ ವರದಿಯನ್ನು ಮಾತ್ರ ಆಧಾರವಾಗಿಟ್ಟುಕೊಳ್ಳಲು ತೀರ್ಮಾನಿಸಿ, ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ ರವರ ಅಧ್ಯಕ್ಷತೆಯಲ್ಲಿ ರಚಿತವಾಗಿರುವ ಸಮಿತಿಯು ಇಂತಹ ಅರ್ಜಿಗಳನ್ನು ತಪಾಸಣೆ ನಡೆಸಿ ವರದಿ ಸಲ್ಲಿಸುವ ಅಗತ್ಯವಿಲ್ಲವೆಂದು ತೀರ್ಮಾನಿಸಲಾಗಿದೆ.

ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 169 ಟಿಇಸಿ 2007, ಬೆಂಗಳೂರು, ದಿನಾಂಕ: 6ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಅಸ್ತಿತ್ವದಲ್ಲಿರುವ ಇಂಜಿನಿಯರಿಂಗ್ / ಮ್ಯಾನೇಜ್‌ಮೆಂಟ್ ಕಾಲೇಜುಗಳ ನೂತನ ಕೋರ್ಸುಗಳ ಪ್ರಾರಂಭಕ್ಕೆ ಹಾಗೂ ವಿದ್ಯಾರ್ಥಿ ಪ್ರಮಾಣದ ಹೆಚ್ಚಳದ ಪರಿಶೀಲನೆಗಾಗಿ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ತಜ್ಞರ ಸಮಿತಿಯು ಇನ್ನು ಮುಂದೆ ಅಸ್ತಿತ್ವದಲ್ಲಿರುವ ಇಂಜಿನಿಯರಿಂಗ್ ಕಾಲೇಜುಗಳಲ್ಲಿನ ಹಾಲಿ ಕೋರ್ಸುಗಳಲ್ಲಿ ವಿದ್ಯಾರ್ಥಿ ಪ್ರಮಾಣದ ಹೆಚ್ಚಳಕ್ಕೆ ಸಂಬಂಧಿಸಿದಂತೆ ತಪಾಸಣೆ ನಡೆಸಿ ವರದಿ ಸಲ್ಲಿಸುವ ಅವಶ್ಯಕತೆ ಇಲ್ಲವೆಂದು ಹಾಗೂ ಈ ಬಗ್ಗೆ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯದ ಅಧೀನದಲ್ಲಿರುವ ತಜ್ಞರ ಸಮಿತಿಯು ಮಾತ್ರ ತಪಾಸಣೆ ನಡೆಸಿ ವರದಿ ನೀಡಬೇಕೆಂದು ಆದೇಶಿಸಲಾಗಿದೆ.

ಈ ಮೇಲಿನ ಅಂಶವನ್ನು ಹೊರತುಪಡಿಸಿ ಇನ್ನಾವುದೇ ಬದಲಾವಣೆಗಳು ಇರುವುದಿಲ್ಲವೆಂದು ಈ ಮೂಲಕ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 1468

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಕಾಲೇಜು ಮತ್ತು ತಾಂತ್ರಿಕ ಶಿಕ್ಷಣ).

**ವಿಷಯ:** ಶ್ರೀಮತಿ ಎಂ.ಎನ್. ಕೃಷ್ಣಕುಮಾರಿ, ಆಂಗ್ಲಭಾಷಾ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:**
1) ಆದೇಶ ಸಂಖ್ಯೆ:ಡಿಪಿಎಆರ್ 21 ಕೆಎಂಎಂ 99 ದಿನಾಂಕ: 18.06.99.
2) ಜ್ಞಾಪನ ಸಂಖ್ಯೆ: ಕಾಶಿಇ 21 ಎಫ್‌ಡಿಎಲ್ 99 ಸಿವಿ-3 ದಿನಾಂಕ: 12.03.2003.
3) ಜ್ಞಾಪನ ಸಂಖ್ಯೆ: ಇಡಿ 169 ಡಿಸಿಇ 2003, ದಿನಾಂಕ: 30.10.2004.
4) ಕಾರಣ ಕೇಳುವ ನೋಟೀಸು ಸಂಖ್ಯೆ: ಇಡಿ 169 ಡಿಸಿಇ 2003, ದಿನಾಂಕ: 23/26.06.2006.
5) ವಿಜಯ ಕರ್ನಾಟಕ ದಿನ ಪತ್ರಿಕೆಯಲ್ಲಿ ದಿನಾಂಕ: 18.10.2006 ರಂದು ಪ್ರಕಟವಾದ ಪ್ರಕಟಣೆ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀಮತಿ ಎಂ.ಎನ್. ಕೃಷ್ಣಕುಮಾರಿ, ಆಂಗ್ಲಭಾಷಾ ಉಪನ್ಯಾಸಕರು, ಸರ್ಕಾರಿ ಕಲಾ ಕಾಲೇಜು, ಬೆಂಗಳೂರು ಇವರನ್ನು ಎರಡು ವರ್ಷಗಳ ಉನ್ನತ ವ್ಯಾಸಂಗಕ್ಕಾಗಿ ಓಲ್ಡ್ ಡಾಮಿನಿಯನ್ ಯೂನಿವರ್ಸಿಟಿ ವರ್ಜಿನಿಯಾ, ಯು.ಎಸ್.ಎ. ಇಲ್ಲಿಗೆ ನಿಯೋಜಿಸಲಾಗಿತ್ತು. ಸದರಿ ವ್ಯಾಸಂಗದ ಅವಧಿ ದಿನಾಂಕ: 8.8.2001ರಂದು ಮುಗಿದಿದ್ದರೂ ಕರ್ತವ್ಯಕ್ಕೆ ಹಾಜರಾಗಲಿಲ್ಲ. ಈ ಸಂಬಂಧ ಮೇಲೆ (2), (3), ಮತ್ತು (4)ರಲ್ಲಿ ಓದಲಾದ ಜ್ಞಾಪನ : ಕಾರಣ ಕೇಳುವ ನೋಟೀಸ್‌ನ್ನು ಸ್ಥಳೀಯ ಹಾಗೂ ವಿದೇಶದ ವಿಳಾಸಕ್ಕೆ ರವಾನಿಸಿದರೂ ಸ್ವೀಕೃತವಾಗದೆ ವಾಪಸ್ಸು ಬಂದಿದ್ದವು. ನಂತರ ಮೇಲೆ (5)ಲ್ಲಿ ಓದಲಾದ ಪ್ರಕಟಣೆ ನೀಡುತ್ತಾ, ದಿನಾಂಕ: 18.10.2006ರಿಂದ ಏಳು ದಿನಗಳಲ್ಲಿ ಖುದ್ದಾಗಿ ಹಾಜರಾಗದಿದ್ದಲ್ಲಿ ನಿಯಮಗಳ ರೀತ್ಯ ಮುಂದಿನ ಕ್ರಮಕೈಗೊಳ್ಳಲಾಗುವುದೆಂದು ತಿಳಿಸಲಾಗಿತ್ತು. ಆದಾಗ್ಯೂ ಶ್ರೀಮತಿ ಎಂ.ಎನ್. ಕೃಷ್ಣಕುಮಾರಿ ಇವರಿಂದ ಯಾವುದೇ ಪ್ರತಿಕ್ರಿಯೆ ವ್ಯಕ್ತವಾಗಿರುವುದಿಲ್ಲ.

ಆದಕಾರಣ ಶ್ರೀಮತಿ ಎಂ.ಎನ್. ಕೃಷ್ಣಕುಮಾರಿ ಇವರನ್ನು ಸೇವೆಯಿಂದ ವಜಾಗೊಳಿಸಲು ಸರ್ಕಾರ ನಿರ್ಧರಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 169 ಡಿಸಿಇ 2003, ಬೆಂಗಳೂರು, ದಿನಾಂಕ: 30ನೇ ಜುಲೈ 2007**

ಶ್ರೀಮತಿ ಎಂ.ಎನ್. ಕೃಷ್ಣಕುಮಾರಿ, ಆಂಗ್ಲಭಾಷಾ ಉಪನ್ಯಾಸಕರು, ಸರ್ಕಾರಿ ಕಲಾ ಕಾಲೇಜು, ಬೆಂಗಳೂರು ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳ (1958) ನಿಯಮ 108 ಹಾಗೂ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ (1957) ನಿಯಮ 14(ii) ಹಾಗೂ ಅದೇ ನಿಯಮಗಳ ನಿಯಮ 8(viii) ನ್ನು ಓದಿಕೊಂಡಂತೆ ಪ್ರದತ್ತವಾದ ಅಧಿಕಾರ ಚಲಾಯಿಸಿ ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಂ. ನಂದಕುಮಾರ್**

ಪಿ.ಆರ್. 1469

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ.

**ವಿಷಯ:** ಗಾಂಧಿ ಗ್ರಾಮೀಣ ಗುರುಕುಲ ವಸತಿ ಶಾಲೆ ಹೊಸರೀತ್ತಿ ವೆಚ್ಚದ ಮಿತಿಗಳನ್ನು ಹೆಚ್ಚಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಇಡಿ:110 ಯೋಯೋಕ 2002 ದಿನಾಂಕ:06.05.2003.
2) ಸರ್ಕಾರದ ಆದೇಶ ಸಂಖ್ಯೆ:ಇಡಿ 272 ಯೋಯೋಕ 2006 ದಿನಾಂಕ:14.11.2006.
3) ಕಾರ್ಯದರ್ಶಿ, ಗಾಂಧೀ ಗ್ರಾಮೀಣ ಗುರುಕುಲ ವಸತಿ ಶಾಲೆ, ಹೊಸರೀತ್ತಿ ರವರ ದಿನಾಂಕ 12.07.2007ರ ಮನವಿ.

**ಪ್ರಸ್ತಾವನೆ:**

(1) ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ 2003-04ನೇ ಶೈಕ್ಷಣಿಕ ವರ್ಷದಿಂದ ಅನ್ವಯವಾಗುವಂತೆ ಶಿಕ್ಷಣ ಇಲಾಖೆಯ ವತಿಯಿಂದ ವಿವಿಧ ಜಿಲ್ಲೆಗಳಲ್ಲಿ ನಡೆಯುತ್ತಿರುವ 32 ವಸತಿ ಶಾಲೆಗಳು ಮತ್ತು ನಾಲ್ಕು ಅನುದಾನಿತ ವಸತಿ ಶಾಲೆಗಳನ್ನು ಹಾಲಿ ಇರುವಂತೆ ಸಮಾಜ ಕಲ್ಯಾಣ ಇಲಾಖೆಯ ಅಧೀನಕ್ಕೊಳಪಡುವ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಇವರು ನಿರ್ವಹಿಸಲು ಸಮಾಜ ಕಲ್ಯಾಣ ಇಲಾಖೆಗೆ ವರ್ಗಾಯಿಸಲಾಗಿದೆ.

(2) ಮೇಲೆ ಓದಲಾದ (2) ಸರ್ಕಾರದ ಆದೇಶದಲ್ಲಿ ಶಿಕ್ಷಣ ಇಲಾಖೆಯಿಂದ ಆರಂಭಿಸಲ್ಪಟ್ಟು ಈಗ ಸಮಾಜ ಕಲ್ಯಾಣ ಇಲಾಖೆಯ ಅಧೀನದಲ್ಲಿ ಬರುವ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘಕ್ಕೆ ವರ್ಗಾಯಿಸಲ್ಪಟ್ಟ 32 ವಸತಿ ಶಾಲೆಗಳಿಗೆ ಅನ್ವಯವಾಗುವಂತೆ ಹೊಸದರವನ್ನು ದಿನಾಂಕ:14.11.2006 ರಿಂದ ಜಾರಿಗೆ ಬರುವಂತೆ ಪರಿಷ್ಕೃತಗೊಳಿಸಿ ಆದೇಶಿಸಲಾಗಿದೆ.

(3) ಮೇಲೆ ಓದಲಾದ (3)ರ ಪತ್ರದಲ್ಲಿ ಕಾರ್ಯದರ್ಶಿ, ಗಾಂಧೀ ಗ್ರಾಮೀಣ ಗುರುಕಲ ವಸತಿ ಶಾಲೆ, ಹೊಸರೀತ್ತಿರವರು ಸಮಾಜ ಕಲ್ಯಾಣ ಇಲಾಖೆ ಅಡಿಯಲ್ಲಿ ಬರುವ ವಸತಿ ಶಾಲೆಗಳಿಗೆ ವೆಚ್ಚದ ಮಿತಿಗಳನ್ನು ಪರಿಷ್ಕರಿಸಿ ಆದೇಶ ಹೊರಡಿಸಲಾಗಿದೆ. ಆದರೆ ನಮ್ಮ ಸಂಸ್ಥೆಯ ವೆಚ್ಚದ ಮಿತಿಗಳನ್ನು ಹೆಚ್ಚಿಸಿ ಆದೇಶ ಹೊರಡಿಸಿರುವುದಿಲ್ಲವೆಂದು ತಿಳಿಸಿ ಇದರ ಬಗ್ಗೆ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

(4) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ:281:ಯೋಯೋಕ 2004, ಬೆಂಗಳೂರು, ದಿನಾಂಕ: 2ನೇ ಆಗಸ್ಟ್ 2007**

**[ಇಡಿ: 111 : ಸ್ವೀಮರ(ಯುನಿಕ್) 2007, ದಿನಾಂಕ: 2ನೇ ಆಗಸ್ಟ್ 2007]**

(5) ಶಿಕ್ಷಣ ಇಲಾಖೆಯಿಂದ ಪ್ರಾರಂಭಿಸಲ್ಪಟ್ಟು ಈಗ ಸಮಾಜ ಕಲ್ಯಾಣ ಇಲಾಖೆಯ ಅಧೀನದಲ್ಲಿ ಬರುವ ಗಾಂಧೀ ಗ್ರಾಮೀಣ ಗುರುಕುಲ ವಸತಿ ಶಾಲೆ, ಹೊಸರೀತ್ತಿ ವಸತಿ ಶಾಲೆಗೆ ಅನ್ವಯವಾಗುವಂತೆ ಕೆಳಗೆ ನಮೂದಿಸಿರುವಂತೆ ಹೊಸ ದರವನ್ನು ಈಗಿನಿಂದ ಜಾರಿಗೆ ಬರುವಂತೆ ಪರಿಷ್ಕೃತಗೊಳಿಸಿ ಆದೇಶಿಸಲಾಗಿದೆ.

| ಕ್ರ. ಸಂ. | ವಿವರ | ನಿಗದಿಪಡಿಸಿದ ಪರಿಷ್ಕೃತ ದರ (ರೂಗಳಲ್ಲಿ) |
|---|---|---|
| 1. | ಆಹಾರ (ಮಾಹೇಯಾನ) | 500.00 |
| 2. | ಸಮವಸ್ತ್ರ, ಶೂ, ಸಾಕ್ಸ್ (ವಾರ್ಷಿಕ) | 800.00 |
| 3. | ಪಠ್ಯಪುಸ್ತಕ, ಲೇಖನ ಸಾಮಗ್ರಿ (ವಾರ್ಷಿಕ) | 500.00 |
| 4. | ಸಾದಿಲ್ವಾರು, ಸೋಪು, ಎಣ್ಣೆ, ಇತ್ಯಾದಿ ಮಾಹೇಯಾನ (ವಿದ್ಯಾರ್ಥಿಗಳಿಗಾಗಿ) | 100.00 |
| 5. | ವೈದ್ಯಕೀಯ ವೆಚ್ಚ (ಪ್ರತಿ ಶಾಲೆಗೆ), (ವಾರ್ಷಿಕ) | 10,000.00 |
| 6. | ವಿದ್ಯುಚ್ಛಕ್ತಿ, ನೀರು (ಪ್ರತಿ ಮಾಹೆಗೆ ಅಂದಾಜಿನ ಪ್ರಕಾರ ರೂ.10,000/-) | ವಾಸ್ತವ ವೆಚ್ಚ |
| 7. | ಇತರೆ ವೆಚ್ಚ, (ಪರೀಕ್ಷಾ ಶುಲ್ಕ, ದೂರವಾಣಿ, ಅಂಚೆ ಇತ್ಯಾದಿ) | ವಾಸ್ತವ ವೆಚ್ಚ |
| 8. | ಶಾಲಾ ಸಾದಿಲ್ವಾರು ಮಾಸಿಕ | - |
| 9. | ಹಾಸಿಗೆ ಹೊದಿಕೆ (ವಾರ್ಷಿಕ) | 600.00 |
| 10. | ಮಂಚ, ಟ್ರಂಕ್ (ಅಗತ್ಯವಿರುವಾಗ) | 3,000.00 |

(6) ಸದರಿ ಮೊತ್ತವನ್ನು 2007-08ನೇ ಸಾಲಿಗೆ ಜಿಲ್ಲಾ ಪಂಚಾಯತ್ ಲಿಂಕ್ ಡಾಕ್ಯುಮೆಂಟ್ ನಡಿ ಲೆಕ್ಕ ಶೀರ್ಷಿಕೆ 2202-02-110-3-56 (ಯೋಜನೇತರ)(ಗಾಂಧೀ ಗ್ರಾಮೀಣ ಗುರುಕುಲ ಹೊಸರೀತ್ತಿ) ದಡಿ ಒದಗಿಸಿರುವ ಅನುದಾನದಲ್ಲಿ ಭರಿಸತಕ್ಕದ್ದು.

(7) ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ ಆಇ:1424:ವೆಚ್ಚ-8/2006; ದಿನಾಂಕ:16.06.2007ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 1470

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಸಹ ಕಾರ್ಯದರ್ಶಿ ಶಿಕ್ಷಣ ಇಲಾಖೆ. (ಯೋಜನೆ).

## ಇಂಧನ ಸಚಿವಾಲಯ

**ವಿಷಯ:** ಮೆ:: ಸುಜ್ಞಾನೇಶ್ವರ ಹೈಡಲ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಸೊನ್ತಿ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 267 ಎನ್‌ಸಿಇ 2004 ದಿನಾಂಕ:13.09.2004.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ದಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ:ಕೆಆರ್‌ಇಡಿ/06/ಸೊನ್ತಿ/2007/1651 ದಿನಾಂಕ: 25.7.2007.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಆದೇಶದಲ್ಲಿ ಮೆ:: ಸುಜ್ಞಾನೇಶ್ವರ ಹೈಡಲ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶಹಪುರ ತಾಲ್ಲೂಕಿನ ಸಿರವಾಲ ಬಳಿ ಭೀಮಾ ನದಿಗೆ ಕಟ್ಟುತ್ತಿರುವ ಬ್ಯಾರೇಜಿಗೆ ಅಡ್ಡಲಾಗಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಸೊನ್ತಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: ಸುಜ್ಞಾನೇಶ್ವರ ಹೈಡಲ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯು ಯೋಜನೆಯ ಸ್ಥಳದಲ್ಲಿ ಬ್ಯಾರೇಜು ಇನ್ನೂ ನಿರ್ಮಾಣದ ಹಂತದಲ್ಲಿ ಇರುವುದರಿಂದ ಯೋಜನೆಯ ಕಾಮಗಾರಿಯನ್ನು ಕೈಗೊಳ್ಳಲಾಗಲಿಲ್ಲವೆಂದು ತಿಳಿಸಿರುವ ಹಿನ್ನೆಲೆಯಲ್ಲಿ ಸದರಿ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಮುಂದಿನ 3 ವರ್ಷಗಳ ಅವಧಿಗೆ ವಿಸ್ತರಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 264 ಎನ್‌ಸಿಇ 2007, ಬೆಂಗಳೂರು, ದಿನಾಂಕ: 9ನೇ ಆಗಸ್ಟ್ 2007**

ಸರ್ಕಾರವು ಮೆ:: ಸುಜ್ಞಾನೇಶ್ವರ ಹೈಡಲ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಗುಲ್ಬರ್ಗಾ ಜಿಲ್ಲೆಯ ಶಹಪುರ ತಾಲ್ಲೂಕಿನ ಸಿರವಾಲ ಬಳಿ ಭೀಮಾ ನದಿಗೆ ಕಟ್ಟುತ್ತಿರುವ ಬ್ಯಾರೇಜಿಗೆ ಅಡ್ಡಲಾಗಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಸೊನ್ತಿ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಮುಂದಿನ 3 ವರ್ಷಗಳ ಅವಧಿಗೆ ವಿಸ್ತರಿಸಲಾಗಿದೆ.

ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್.ಬಿ.ಕೃಷ್ಣಪ್ಪನವರ್**

ಪಿ.ಆರ್. 1472      ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ವಿಷಯ:** ಮೆ:: ಶಿರವಾಳ ಹೈಡಲ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ 0.950 ಮೆಗಾ ವ್ಯಾಟ್ ಸಾಮರ್ಥ್ಯದ ಶಿರವಾಳ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 216 ಎನ್‌ಸಿಇ 2005 ದಿನಾಂಕ:14.09.2005.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ:ಕೆಆರ್‌ಇಡಿ/06/ಶಿರವಾಳ/2007/1650 ದಿನಾಂಕ: 25.7.2007.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಆದೇಶದಲ್ಲಿ ಮೆ:: ಶಿರವಾಳ ಹೈಡಲ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶಹಪುರ ತಾಲ್ಲೂಕಿನ ಶಿರವಾಳ ಗ್ರಾಮ ಬಳಿ ಶಿರವಾಳ ನದಿಗೆ ಅಡ್ಡಲಾಗಿ 0.950 ಮೆಗಾ ವ್ಯಾಟ್ ಸಾಮರ್ಥ್ಯದ ಶಿರವಾಳ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: ಶಿರವಾಳ ಹೈಡಲ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯು ಯೋಜನೆಯ ಸ್ಥಳದಲ್ಲಿ ಬ್ಯಾರೇಜು ಇನ್ನೂ ನಿರ್ಮಾಣದ ಹಂತದಲ್ಲಿ ಇರುವುದರಿಂದ ಯೋಜನೆಯ ಕಾಮಗಾರಿಯನ್ನು ಕೈಗೊಳ್ಳಲಾಗಲಿಲ್ಲವೆಂದು ತಿಳಿಸಿರುವ ಹಿನ್ನೆಲೆಯಲ್ಲಿ ಸದರಿ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಮುಂದಿನ 3 ವರ್ಷಗಳ ಅವಧಿಗೆ ವಿಸ್ತರಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 265 ಎನ್‌ಸಿಇ 2007, ಬೆಂಗಳೂರು, ದಿನಾಂಕ: 9ನೇ ಆಗಸ್ಟ್ 2007**

ಸರ್ಕಾರವು ಮೆ:: ಶಿರವಾಳ ಹೈಡಲ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಗುಲ್ಬರ್ಗಾ ಜಿಲ್ಲೆಯ ಶಹಪುರ ತಾಲ್ಲೂಕಿನ ಶಿರವಾಳ ಗ್ರಾಮದ ಬಳಿ ಶಿರವಾಳ ನದಿಗೆ ಅಡ್ಡಲಾಗಿ 0.950 ಮೆಗಾ ವ್ಯಾಟ್ ಸಾಮರ್ಥ್ಯದ ಶಿರವಾಳ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಮುಂದಿನ 3 ವರ್ಷಗಳ ಅವಧಿಗೆ ವಿಸ್ತರಿಸಲಾಗಿದೆ.

ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್.ಬಿ.ಕೃಷ್ಣಪ್ಪನವರ್**

ಪಿ.ಆರ್. 1473      ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ), ರಾಜಾಜಿನಗರ, ಬೆಂಗಳೂರು ಈ ಸಂಸ್ಥೆಗೆ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಕಂಇ 41 ಮುನೋಸೊ 2004, ದಿನಾಂಕ: 26.08.2005, 28.06.2006.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 53 ಮುನೋಸೊ 2006, ದಿನಾಂಕ: 31.10.2006, 02.02.2007.
3. ಆಡಳಿತಾಧಿಕಾರಿಗಳು, ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ), ರಾಜಾಜಿನಗರ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿ2. 827 ಸಿ.ಫ್ಯಾ. ಅ.6:88/2006-07, ದಿನಾಂಕ:21.05.2007.

**ಪ್ರಸ್ತಾವನೆ:**

ಮೇಲೆ ಓದಲಾದ (1) (2)ರ ಆದೇಶಗಳಲ್ಲಿ ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ), ರಾಜಾಜಿನಗರ, ಬೆಂಗಳೂರು ಈ ಸಂಸ್ಥೆಯ ಹಿತದೃಷ್ಟಿಯಿಂದ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿದ್ದು, ಕಾಲಕಾಲಕ್ಕೆ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಲಾಗಿದೆ. ಮೇಲೆ ಓದಲಾದ (3)ರ ಪತ್ರದಲ್ಲಿ ಸರ್ಕಾರದ ಆದೇಶ ಸಂಖ್ಯೆ: ಕಂಇ 53 ಮುನೋಸೋ 2006, ದಿನಾಂಕ:02.02.2007 ರಂತೆ ದಿನಾಂಕ:28.02.2007 ರಂದು ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ), ರಾಜಾಜಿನಗರ, ಬೆಂಗಳೂರು ಇಲ್ಲಿ ಆಡಳಿತಾಧಿಕಾರಿ ಪ್ರಭಾರ ವಹಿಸಿಕೊಂಡಿದ್ದು, ಈ ಸಂಸ್ಥೆಯ ವ್ಯವಸ್ಥಾಪಕರಿಂದ ಹಿಂದಿನ ಆಡಳಿತಾಧಿಕಾರಿಗಳ ಹೇಳಿಕೆ ಮತ್ತು ವಿವರ ಪಡೆದು ಸದರಿ ಸಂಸ್ಥೆಯ ನಡವಳಿ ಪುಸ್ತಕದಲ್ಲಿ ಪ್ರಸ್ತಾಪಿಸಿರುವಂತೆ, ಶರ್ಮಾ & ಕಂಪನಿ, ಎನ್.ಆರ್. ರಸ್ತೆ, ಬೆಂಗಳೂರು ಲೆಕ್ಕಪರಿಶೋಧಕರಿಗೆ ಲೆಕ್ಕ ತಪಾಸಣೆ ಕೈಗೊಳ್ಳಲು ದಿನಾಂಕ:19.04.2006 ಹಾಗೂ 05.08.2006 ರಂದು ಆದೇಶಿಸಲಾಗಿದ್ದು, ಕಾರಣಾಂತರಗಳಿಂದ ಲೆಕ್ಕ ಪರಿಶೋದನಾ ವರದಿ ನೀಡಿರುವುದಿಲ್ಲ. ಸದರಿ ವರದಿ ನೀಡಲು ಲೆಕ್ಕ ಪರಿಶೋಧಕರಿಗೆ ದಿನಾಂಕ:03.04.2007 ಹಾಗೂ 05.05.2007 ರಂದು ಪತ್ರ ಬರೆದು ಕೂಡಲೇ ಲೆಕ್ಕ ಪರಿಶೋಧನಾ ವರದಿಯನ್ನು ನೀಡುವಂತೆ ಕೋರಿರುವುದಾಗಿ ವರದಿ ನೀಡಿರುತ್ತಾರೆ. ಹಾಗೂ ದಿನಾಂಕ:25.05.2007ಕ್ಕೆ ಆಡಳಿತಾಧಿಕಾರಿ ಅವಧಿ ಮುಕ್ತಾಯವಾಗಿದ್ದು, ಇನ್ನೂ 6 ತಿಂಗಳ ಅವಧಿಗೆ ಅವಧಿಯನ್ನು ವಿಸ್ತರಿಸುವಂತೆ ಕೋರಿರುವುದನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 36 ಮುನೋಸೋ 2007, ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸಿಟಿ ಪ್ಯಾಮಿಲೀಸ್ ಅಸೋಸಿಯೇಷನ್ (ರಿ), ರಾಜಾಜಿನಗರ, ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ 27-ಎ ಪ್ರಕಾರ ಕ್ಷೇತ್ರ ಶಿಕ್ಷಣಾಧಿಕಾರಿ, ಉತ್ತರ ವಲಯ-1, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು-3 ಇವರನ್ನು ಆಡಳಿತಾಧಿಕಾರಿಯಾಗಿ ನೇಮಕ ಮಾಡಲಾಗಿದ್ದು, ಸದರಿ ಆಡಳಿತಾಧಿಕಾರಿ ಅವಧಿಯು ದಿನಾಂಕ:25.05.2007ಕ್ಕೆ ಮುಕ್ತಾಯವಾಗಿರುವುದರಿಂದ, ದಿನಾಂಕ: 26.05.2007 ರಿಂದ 6 ತಿಂಗಳ ವರೆಗೆ ವಿಸ್ತರಿಸಿ, ಈ ನಿಗದಿತ ಅವಧಿಯಲ್ಲಿಯೇ ಆಡಳಿತಾಧಿಕಾರಿಗಳು ಈ ಸಂಸ್ಥೆಗೆ ಚುನಾವಣೆಯನ್ನು ಕಟ್ಟುನಿಟ್ಟಾಗಿ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಲಿಂಗ**

ಪೀಠಾಧಿಕಾರಿ

ಕಂದಾಯ ಇಲಾಖೆ (ನೋಂದಣಿ & ಮುದ್ರಾಂಕ)

ಪಿ.ಆರ್. 1476

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** 2007-08ನೇ ಸಾಲಿನಲ್ಲಿ ಪುರಸಭೆ/ನಗರಸಭೆಗಳಿಗೆ ಮಂಜೂರಾಗಿರುವ ಮುಕ್ತನಿಧಿ ಅನುದಾನದಡಿ ಕಾಮಗಾರಿಗಳನ್ನು ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ ಲೋಕೋಪಯೋಗಿ ಇಲಾಖೆ ಹಾಗೂ ನಿರ್ಮಿತ ಕೇಂದ್ರಗಳ ವತಿಯಿಂದ ಅನುಷ್ಠಾನಗೊಳಿಸುವ ಕುರಿತು ಅನುಮೋದನೆ.

**ಓದಲಾಗಿದೆ:** ಸರ್ಕಾರದ ಸುತ್ತೋಲೆ ಸಂ: ನಅಇ 186 ಜಿಇಎಲ್ 2007 ದಿನಾಂಕ: 16.06.2007.

**ಪ್ರಸ್ತಾವನೆ:**

ಮೇಲೆ ಓದಲಾದ ಸುತ್ತೋಲೆಯಲ್ಲಿ ರಾಜ್ಯದ ನಗರ ಸ್ಥಳೀಯ ಸಂಸ್ಥೆಗಳಿಗೆ ಹಂಚಿಕೆಯಾದ ಮುಕ್ತ ನಿಧಿ ಅನುದಾನವನ್ನು ಪೂರ್ಣವಾಗಿ ವೆಚ್ಚಮಾಡಲು ಹಾಗೂ ಸಾರ್ವಜನಿಕರು ಯೋಜನೆಗಳ ಪೂರ್ಣ ಪ್ರಯೋಜನೆಯನ್ನು ಪಡೆಯಲು ಅನುವಾಗುವಂತೆ ಹಲವು ಮಾರ್ಗಸೂಚಿಗಳನ್ನು ಅಳವಡಿಸಿಕೊಂಡು ಕಟ್ಟುನಿಟ್ಟಾಗಿ ಅನುಷ್ಠಾನಗೊಳಿಸುವಂತೆ ಸೂಚಿಸಲಾಗಿದೆ.

ರಾಜ್ಯದ ನಗರ ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿ ಕಾಮಗಾರಿಗಳಿಗೆ 2007-08ನೇ ಸಾಲಿನಲ್ಲಿ ರೂ.878.19 ಕೋಟಿಗಳ ಮುಕ್ತನಿಧಿ (untied grant) ಅನುದಾನವನ್ನು ಪುರಸಭೆ/ನಗರಸಭೆ/ಪಟ್ಟಣ ಪಂಚಾಯ್ತಿಗಳಿಗೆ ಹಂಚಿಕೆ ಮಾಡಲಾಗಿರುತ್ತದೆ. ಹೀಗೆ ಬಿಡುಗಡೆಯಾದ ಅನುದಾನವು ಸಮರ್ಪಕವಾಗಿ ಬಳಕೆಯಾಗದೇ ಇರುವುದು ಹಾಗೂ ರಾಜ್ಯ ಹಣಕಾಸು ಅನುದಾನದ ಯೋಜನೆಯ ಪ್ರಗತಿ ತೃಪ್ತಿಕರವಾಗಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಇದಲ್ಲದೆ ಕೆಲವು ಪುರಸಭೆ/ನಗರಸಭೆಗಳಲ್ಲಿ ಸಿಬ್ಬಂದಿ ಕೊರತೆ ಇರುವುದರಿಂದ ಮೇಲ್ಕಂಡಂತೆ ಮಂಜೂರಾಗಿರುವ ಅನುದಾನದಿಂದ ಕಾಮಗಾರಿಗಳನ್ನು ಕೈಗೊಳ್ಳಲು ಸಾಧ್ಯವಾಗುತ್ತಿಲ್ಲವೆಂಬ ಅಂಶವು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಆದುದರಿಂದ ಸರ್ಕಾರದಿಂದ ಬಿಡುಗಡೆ ಮಾಡಿದ ಮುಕ್ತನಿಧಿ ಅನುದಾನವನ್ನು 2007-08ನೇ ಸಾಲಿನ ಆರ್ಥಿಕ ವರ್ಷದಲ್ಲಿ ಪರಿಣಾಮಕಾರಿ ಹಾಗೂ ಗುಣಾತ್ಮಕವಾಗಿ ಅನುಷ್ಠಾನ ಮಾಡಲು ಸದರಿ ಕಾಮಗಾರಿಗಳನ್ನು ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ನಿರ್ಮಿತಿ ಕೇಂದ್ರಗಳು ಹಾಗೂ ಲೋಕೋಪಯೋಗಿ ಇಲಾಖೆಯ ಮುಖಾಂತರ ನಿರ್ವಹಿಸುವುದು ಸೂಕ್ತವೆಂದು ಸರ್ಕಾರ ನಿರ್ಣಯಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ:ನಅಇ 197 ಜಿಇಎಲ್ 2007, ಬೆಂಗಳೂರು, ದಿನಾಂಕ: 31ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ 2007-08ನೇ ಸಾಲಿನಲ್ಲಿ ಬಿಡುಗಡೆಯಾಗಿರುವ ಅನುದಾನವನ್ನು ತುರ್ತಾಗಿ ಹಾಗೂ ಕಾಲಮಿತಿಯೊಳಗಾಗಿ ಪರಿಣಾಮಕಾರಿ ಹಾಗೂ ಗುಣಾತ್ಮಕವಾಗಿ ಅನುಷ್ಠಾನ ಮಾಡಲು ಅನುಕೂಲಗವಾಗುವಂತೆ ಸ್ಥಳೀಯ ಸಂಸ್ಥೆಗಳ ನಿರ್ಣಯದ ಆಧಾರದ ಮೇಲೆ ಸದರಿ ಕಾಮಗಾರಿಗಳನ್ನು ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ನಿರ್ಮಿತಿ ಕೇಂದ್ರಗಳು ಹಾಗೂ ಲೋಕೋಪಯೋಗಿ ಇಲಾಖೆಯ ಮುಖಾಂತರ ನಿರ್ವಹಿಸಲು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಅಧಿಕಾರವನ್ನು ಪ್ರತ್ಯಾಯೋಜಿಸಿ ಆದೇಶಿಸಿದೆ.

ಸಂಬಂಧಪಟ್ಟ ನಗರ ಸ್ಥಳೀಯ ಸಂಸ್ಥೆಗಳ ನಿರ್ಣಯಗಳ ಆಧಾರದ ಮೇಲೆ ಜಿಲ್ಲಾಧಿಕಾರಿಗಳು ಕಾಮಗಾರಿಗಳನ್ನು ಮೇಲ್ಕಂಡ ಇಲಾಖೆಗಳ ಮುಖಾಂತರ ನಿರ್ವಹಿಸಲು ಅನುದಾನ ಬಿಡುಗಡೆ ಮಾಡತಕ್ಕದ್ದು.

ಸಾಧ್ಯವಾದಷ್ಟು ಸ್ಥಳೀಯ ಸಂಸ್ಥೆಗಳಿಗೆ ಸಮೀಪವಿರುವ ಇಲಾಖೆ/ಸಂಸ್ಥೆಗಳಿಗೆ ಕಾಮಗಾರಿಗಳನ್ನು ವಹಿಸತಕ್ಕದ್ದು.

ಸರ್ಕಾರದ ಸುತ್ತೋಲೆ ಸಂ:ನಅಇ 186 ಜಿಇಎಲ್ 2007 ದಿನಾಂಕ: 16.6.2007ರಲ್ಲಿ ಪ್ರಸ್ತಾಪಿಸಿರುವ ಕಾಮಗಾರಿಗಳನ್ನು ಮಾತ್ರ ಸದರಿ ಇಲಾಖೆ/ಸಂಸ್ಥೆಗಳಿಗೆ ವಹಿಸತಕ್ಕದ್ದು.

ಕರ್ನಾಟಕ ಪೌರಸಭೆಗಳ (ಸರ್ಕಾರದ ಅಧಿಕಾರ ಪ್ರತ್ಯಾಯೋಜನೆ) ನಿಯಮಗಳು 1965ರನ್ವಯ ಹಾಗೂ ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ ಕಲಂ 321ರಲ್ಲಿ ಮಾಡಲಾದ ಅಧಿಕಾರ ಪ್ರತ್ಯಾಯೋಜನೆಯನ್ವಯ ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 1477

## ಶಿಕ್ಷಣ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಇಡಿ 296 ಪಿಜಿಸಿ 2007, ಬೆಂಗಳೂರು, ದಿನಾಂಕ: 6ನೇ ಆಗಸ್ಟ್ 2007**

**ವಿಷಯ:** ರಾಜ್ಯದ ಅನುದಾನಿತ ಕನ್ನಡ ಮಾಧ್ಯಮದ ಹಿರಿಯ ಪ್ರಾಥಮಿಕ ಹಾಗೂ ಪ್ರೌಢ ಶಾಲೆಗಳಲ್ಲಿ ಪರ್ಯಾಯವಾಗಿ, ಹೆಚ್ಚುವರಿಯಾಗಿ ಅನುದಾನರಹಿತ ಆಂಗ್ಲ ಮಾಧ್ಯಮದ ವಿಭಾಗಗಳನ್ನು ಮಂಜೂರು ಮಾಡುತ್ತಿರುವ ಬಗ್ಗೆ.

ರಾಜ್ಯದ ಅನುದಾನಿತ ಕನ್ನಡ ಮಾಧ್ಯಮದ ಹಿರಿಯ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ಪೋಷಕರ ಕೋರಿಕೆಯ ಮೇರೆಗೆ ಪರ್ಯಾಯವಾಗಿ ಶಿಕ್ಷಣ ಇಲಾಖೆಯಿಂದ ಹೆಚ್ಚುವರಿಯಾಗಿ ಅನುದಾನರಹಿತ ಆಂಗ್ಲ ಮಾಧ್ಯಮದ ವಿಭಾಗಗಳನ್ನು ಮಂಜೂರು ಮಾಡಲು ಆಸ್ಪದ ಇರುತ್ತದೆ. ಈ ರೀತಿ ಆಂಗ್ಲ ಮಾಧ್ಯಮಕ್ಕೆ ಅನುಮತಿ ಪಡೆದ ಶಾಲೆಗಳಲ್ಲಿ ಪ್ರತ್ಯೇಕ ಶಿಕ್ಷಕರನ್ನು ನೇಮಕ ಮಾಡಿಕೊಳ್ಳದೆ ಕನ್ನಡ ಮಾಧ್ಯಮದ ಅನುದಾನಿತ ವಿಭಾಗಗಳಲ್ಲಿ ಸೇವೆ ಸಲ್ಲಿಸುತ್ತಿರುವ ಶಿಕ್ಷಕರನ್ನು ಆಂಗ್ಲ ಮಾಧ್ಯಮದ ತರಗತಿಗೆ ಬೋಧಿಸಲು ತೊಡಗಿಸುತ್ತಿರುವುದಾಗಿ ಸರ್ಕಾರಕ್ಕೆ ದೂರುಗಳು ಬರುತ್ತಿವೆ.

2. ಸರ್ಕಾರದಿಂದ ಅನುದಾನ ಪಡೆಯುತ್ತಿರುವ ಶಿಕ್ಷಕರು ಅನುದಾನರಹಿತವಾಗಿ ಪ್ರಾರಂಭವಾಗಿರುವ ಆಂಗ್ಲ ಮಾಧ್ಯಮದ ವಿಭಾಗಗಳಲ್ಲಿ ಸೇವೆ ಸಲ್ಲಿಸುತ್ತಿರುವುದು ನಿಯಮ ಬಾಹಿರವಾಗಿರುತ್ತದೆ. ಈ ರೀತಿ ಅನುದಾನಿತ ವಿಭಾಗಗಳ ಶಿಕ್ಷಕರನ್ನು ಅನುದಾನರಹಿತ ಆಂಗ್ಲ ಮಾಧ್ಯಮದ ವಿಭಾಗಗಳ ಬೋಧನೆಗೆ ತೊಡಗಿಸಿಕೊಂಡಿರುವ ಆಡಳಿತ ಮಂಡಳಿಗಳ ವಿರುದ್ಧ ಕರ್ನಾಟಕ ಶಿಕ್ಷಣ ಕಾಯಿದೆ, 1983 ಮತ್ತು ಅದರಡಿ ರಚಿಸಲಾಗಿರುವ ನಿಯಮಗಳ ಪ್ರಕಾರ ಕ್ರಮ ತೆಗೆದುಕೊಳ್ಳಬೇಕೆಂದು ಈ ಮೂಲಕ ಸೂಚನೆ ನೀಡಲಾಗಿದೆ.

3. ಅಲ್ಲದೆ, ಅಗತ್ಯವಿರುವ ಕಡೆ ಆಡಳಿತ ಮಂಡಳಿಗಳು ಬಯಸಿದಲ್ಲಿ ನಿಯಮಾನುಸಾರ ಪರಿಶೀಲಿಸಿ, ಪ್ರತ್ಯೇಕವಾಗಿ ಆಂಗ್ಲ ಮಾಧ್ಯಮದ ಹಿರಿಯ ಪ್ರಾಥಮಿಕ ಹಾಗೂ ಪ್ರೌಢ ಶಾಲೆಗಳ ಮಂಜೂರಾತಿ ನೀಡಲು ಕ್ರಮ ತೆಗೆದುಕೊಳ್ಳತಕ್ಕದ್ದು.

4. ಈ ಮೇಲಿನ ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸಲು ಸಾರ್ವಜನಿಕ ಶಿಕ್ಷಣ ಇಲಾಖೆಯ ಅಧಿಕಾರಿಗಳಿಗೆ ಈ ಮೂಲಕ ಸೂಚಿಸಲಾಗಿದೆ.

**ಬಿ.ಹೆಚ್. ಪಡಸಲಗಿ**

ಪಿ.ಆರ್. 1482

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** 2006-07ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಧಾರವಾಡ, ಕೊಪ್ಪಳ ಮತ್ತು ಶಿವಮೊಗ್ಗ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆಯಾಗಿದ್ದ ರಾಜ್ಯದ ಪಾಲಿನ ಹಣದ ನವೀಕರಣದ ಬಗ್ಗೆ.

**ಓದಲಾಗಿದೆ:**

1. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ : ಆರ್ 17014 : 10 : 2006 ಡಿಆರ್‌ಡಿಎ (ಎಸ್‌ಆರ್ ನಂ.10) ದಿನಾಂಕ:02.05.2006, (ಎಸ್ ನಂ.50) ದಿನಾಂಕ: 10.11.2006 (ಎಸ್ ನಂ.62) ದಿನಾಂಕ: 14.12.2006, (ಎಸ್ ನಂ.95) ದಿನಾಂಕ: 17.01.2007 (ಎಸ್ ನಂ.127) ದಿನಾಂಕ: 05.02.2007, (ಎಸ್ ನಂ. 133) ದಿನಾಂಕ: 06.02.2007, (ಎಸ್ ನಂ.199) ದಿನಾಂಕ: 29.03.2007 ಮತ್ತು (ಎಸ್ ನಂ.207) ದಿನಾಂಕ: 30.03.2007.
2. ಸರ್ಕಾರದ ಆದೇಶದ ಸಂಖ್ಯೆ: ಎಫ್‌ಡಿ 07 ಜಿಪಿಎ 2003 ದಿನಾಂಕ: 14.07.05.
3. ಸಮ ಸಂಖ್ಯೆಯ ಸರ್ಕಾರಿ ಆದೇಶಗಳ ದಿನಾಂಕ: 19.05.2006, 19.12.2006, ತಿದ್ದುಪಡಿ ಆದೇಶ ದಿನಾಂಕ: 22.12.2006, 03.02.2007, 09.03.2007, 29.03.2007 ಮತ್ತು 22.05.2007.
4. ಮುಕಾನಿ, ಜಿಲ್ಲಾ ಪಂಚಾಯತ್, ಕೊಪ್ಪಳ ಇವರ ಪತ್ರ ಸಂಖ್ಯೆ ಜಿಪಂಕೋ:ಆರ್ಥಿಕ:ಸ್ಕೀಂ:ಖಜಾನೆ 2006-07/111 ದಿನಾಂಕ: 18.04.2007.
5. ಮುಕಾನಿ, ಜಿಲ್ಲಾ ಪಂಚಾಯತ್, ಧಾರವಾಡ ಇವರ ಪತ್ರ ಸಂಖ್ಯೆ ಧಾಜಿಪಂ : ಮುಲೆಅ : ಅವಿ1/07-08/132 ದಿನಾಂಕ: 10/14.05.2007.
6. ಮುಕಾನಿ, ಜಿಲ್ಲಾ ಪಂಚಾಯತ್, ಶಿವಮೊಗ್ಗ ಇವರ ಪತ್ರ ಸಂಖ್ಯೆ ಜಿಪಂಶಿ : ಲೇ ಶಾಖೆ : ಸ್ಕೀಂ : 2007-08 ದಿನಾಂಕ: 21.05.2007.

**ಪ್ರಸ್ತಾವನೆ:**

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಮೇಲೆ ಓದಲಾದ (1) ಮತ್ತು (3)ರಲ್ಲಿ ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತ್‌ಗಳಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಒಂದನೇ ಕಂತಿನ ಹಣ ರೂ.4,77,47,000 ಮತ್ತು ರೂ.1,59,20,000 ಹಾಗೂ ಎರಡನೇ ಕಂತಿನ ಅನುದಾನ ರೂ.5,01,56,000 ಮತ್ತು ರೂ.1,67,18,000 ಗಳನ್ನು ಕ್ರಮವಾಗಿ ಬಿಡುಗಡೆ ಮಾಡಿವೆ.

ದಿನಾಂಕ:29.03.2007 ಓದಲಾಗಿದೆ (3)ರ ಆದೇಶದಲ್ಲಿ ರಾಜ್ಯ ಸರ್ಕಾರವು 11 ಜಿಲ್ಲೆಗಳಿಗೆ ಎರಡನೇ ಕಂತಿನ ಬಾಕಿ ಅನುದಾನ ರೂ.24,60,000-00 ವನ್ನು ಬಿಡುಗಡೆ ಮಾಡಲಾಗಿತ್ತು. ಓದಲಾಗಿದೆ (4), (5) ಮತ್ತು (6)ರಲ್ಲಿ ಕ್ರಮವಾಗಿ ಕೊಪ್ಪಳ, ಧಾರವಾಡ ಮತ್ತು ಶಿವಮೊಗ್ಗ ಜಿಲ್ಲಾ ಪಂಚಾಯತಿಗಳಿಗೆ ಆದೇಶವು 2006-07ನೇ ಸಾಲಿನ ವರ್ಷಾಂತ್ಯದಲ್ಲಿ ವಿಳಂಬವಾಗಿ ತಲುಪಿದ್ದರಿಂದ ಹಾಗೂ ಖಜಾನೆಯಲ್ಲಿ ಜಮೆಯಾಗಿರದ ಕಾರಣ, ಖಜಾನೆಯಿಂದ ಸೆಳೆಯಲು ಸಾಧ್ಯವಾಗಿಲ್ಲವೆಂದು ತಿಳಿಸಿ 2007-08ನೇ ಸಾಲಿಗೆ ಅನುದಾನವನ್ನು ನವೀಕರಿಸುವಂತೆ ಕೋರಿವೆ. ಆದುದರಿಂದ ಈ ಮೂರು ಜಿಲ್ಲೆಗಳಿಗೆ ರೂ.7,13,000-00 ಗಳನ್ನು 2007-08ನೇ ಸಾಲಿನ ಆಯವ್ಯಯದಲ್ಲಿ ಡಿಆರ್‌ಡಿಎ ಆಡಳಿತ ಯೋಜನೆಗೆ ಒದಗಿಸಿದ ಅನುದಾನದಿಂದ ಭರಿಸಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 10 ಎಸ್‌ಜೆವೈ ಡಿಆರ್‌ಡಿಎ 2006, ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2007**

ರಾಜ್ಯ ಸರ್ಕಾರವು ಕೊಪ್ಪಳ, ಧಾರವಾಡ ಮತ್ತು ಶಿವಮೊಗ್ಗ ಜಿಲ್ಲಾ ಪಂಚಾಯತಿಗಳಿಗೆ 2006-07ನೇ ಸಾಲಿನ ಅನುದಾನ ಒಟ್ಟು ರೂ.7,13,000-00 ಗಳನ್ನು (ರೂ. ಏಳು ಲಕ್ಷದ ಹದಿಮೂರು ಸಾವಿರ ಮಾತ್ರ) 2007-08ನೇ ಸಾಲಿನ ಆಯವ್ಯಯದಲ್ಲಿ ಡಿಆರ್‌ಡಿಎ ಆಡಳಿತ ಯೋಜನೆಗೆ ಒದಗಿಸಿದ ಅನುದಾನದಿಂದ ಮೂರು ಜಿಲ್ಲಾ ಪಂಚಾಯತಿಗಳಿಗೆ ಈ ಕೆಳಕಂಡಂತೆ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ. ಸಂ. | ಜಿಲ್ಲಾ ಪಂಚಾಯತಿ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ರಾಜ್ಯ ಸರ್ಕಾರವು 2006-07ನೇ ಸಾಲಿನ ಅನುದಾನವನ್ನು 2007-08ನೇ ಸಾಲಿನ ಆಯವ್ಯಯದಿಂದ ನವೀಕರಿಸಿ ಬಿಡುಗಡೆ ಮಾಡುತ್ತಿರುವ ಅನುದಾನ |
|---|---|---|---|---|
| 1. | ಕೊಪ್ಪಳ | 466 | 1500ZZ0010 | 1,54,000 |
| 2. | ಧಾರವಾಡ | 415 | 2500ZZ8798 | 4,98,000 |
| 3. | ಶಿವಮೊಗ್ಗ | 405 | 1400ZZ0002 | 61,000 |
| | | | **ಒಟ್ಟು ರೂ.** | **7,13,000** |

**ಷರತ್ತುಗಳು:**

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಜಿಲ್ಲಾ ಪಂಚಾಯತ್‌ಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ನಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯಗಳ ನಡುವೆ 75:25ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ : "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು-00-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-6-ಜಿಲ್ಲಾ ಪಂಚಾಯತ್-06-ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ-(ಕೇಂದ್ರ ಪುರಸ್ಕೃತ ಯೋಜನೆ) 2007-2008 (2515-00-196-6-06)" ರಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜಡ್‌ಪಿಎ 2003 ದಿನಾಂಕ: 08.09.2004 ಮತ್ತು 14.07.2005 ರನ್ವಯ ಜಿಲ್ಲಾ ಪಂಚಾಯತ್ ನಿಧಿಗೆ ಜಮೆ ಮಾಡಿಕೊಂಡು ಭರಿಸತಕ್ಕದ್ದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

2007-2008ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಉಪ ಕಾರ್ಯದರ್ಶಿ (ಆಡಳಿತ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಆಯಾ ಮಾಹೆಯ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 7ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು, ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 217 ಪಿಬಿಎಸ್ 07 ದಿನಾಂಕ:15.5.2007 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಶ್ಮಿ ಮಹೇಶ್**

ನಿರ್ದೇಶಕರು (ಸ್ವಉಕಾ) ಹಾಗೂ

ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 1483

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಂ.ಬಿ. ಸುಂಕಣ್ಣ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಶಿರಗುಪ್ಪ ಇವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ನಂ. ಒಇ 193 ಪಿಪಿಇ 2003, ದಿನಾಂಕ 06.05.2004.
2) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್ / ಸಿಶಾ-1 / 40 / 2007-08, ದಿನಾಂಕ: 03.07.2007 ಮತ್ತು 18.07.2007.

**ಪ್ರಸ್ತಾವನೆ:**

ಶ್ರೀ ಎಂ.ಬಿ. ಸುಂಕಣ್ಣ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಶಿರಗುಪ್ಪ ಇವರು ಮೇಲೆ (1) ರಲ್ಲಿ ಓದಲಾದ ದಿನಾಂಕ: 06.05.2004ರ (ಕ್ರ.ಸಂ. 24) ಅಧಿಸೂಚನೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡು, ದಿನಾಂಕ 17.05.2004ರ ಪೂರ್ವಾಹ್ನದಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಅಧಿಕಾರಿಯು ಎರಡು ವರ್ಷಗಳ ಪರಿವೀಕ್ಷಣಾ ಅವಧಿಯಲ್ಲಿ ಹುದ್ದೆಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗದೆ ಇರುವುದರಿಂದ, ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿದೆ ಎಂದು ಘೋಷಿಸಲು ಸಾಧ್ಯವಿರುವುದಿಲ್ಲ. ಆದುದರಿಂದ, ಸದರಿ ಅಧಿಕಾರಿಯವರ ಪರಿವೀಕ್ಷಣಾ ಅವಧಿಯನ್ನು ಎರಡು ವರ್ಷಗಳ ಪರಿವೀಕ್ಷಣಾ ಅವಧಿ ಮುಗಿದ ದಿನಾಂಕದಿಂದ ದಿನಾಂಕ 17.05.2006 ರಿಂದ 21.05.2006ರವರೆಗೆ ಕರ್ನಾಟಕ ಸರ್ಕಾರಿ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(ii)ರ ರೀತ್ಯಾ ವಿಸ್ತರಣೆ ಮಾಡಬಹುದಾಗಿದೆ ಎಂದು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಮೇಲೆ (2)ರಲ್ಲಿ ಓದಲಾದ ಪತ್ರಗಳಲ್ಲಿ ಕೋರಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 320 ಪಿಪಿಇ 2007, ಬೆಂಗಳೂರು, ದಿನಾಂಕ: 9ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕರ್ನಾಟಕ ನಾಗರೀಕ ಸೇವೆಗಳು (ಪರಿವೀಕ್ಷಣಾ) ನಿಯಮಗಳು 1977ರ 4ನೇ ನಿಯಮದ ಉಪ ನಿಯಮ (1)ರನ್ವಯ ಶ್ರೀ ಎಂ.ಬಿ. ಸುಂಕಣ್ಣ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಶಿರಗುಪ್ಪ, ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 17.05.2006 ರಿಂದ 21.05.2006ರವರೆಗೆ ವಿಸ್ತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ ಮತ್ತು ಸು ಹಾಗೂ ಕಾಫಿಪೋಸ ಮತ್ತು ಅಭಿಯೋಗ).

ಪಿ.ಆರ್. 1492

**ವಿಷಯ:** ಶ್ರೀಮತಿ ಎಂ.ಎನ್. ಉಷಾ, ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ನಂಜನಗೂಡು ಇವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ನಂ. ಒಇ 193 ಪಿಪಿಇ 2003, ದಿನಾಂಕ 06.05.2004.
2) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ಸಿಶಾ-1/40/2007-08, ದಿನಾಂಕ: 03.07.2007 ಮತ್ತು 25.07.2007.

**ಪ್ರಸ್ತಾವನೆ:**

ಶ್ರೀಮತಿ ಎಂ.ಎನ್. ಉಷಾ, ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ನಂಜನಗೂಡು ಇವರು ಮೇಲೆ (1) ರಲ್ಲಿ ಓದಲಾದ ದಿನಾಂಕ: 06.05.2004ರ (ಕ್ರ.ಸಂ. 16) ಅಧಿಸೂಚನೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡು, ದಿನಾಂಕ 17.05.2004ರ ಪೂರ್ವಾಹ್ನದಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಅಧಿಕಾರಿಯು ಎರಡು ವರ್ಷಗಳ ಪರಿವೀಕ್ಷಣಾ ಅವಧಿಯಲ್ಲಿ ಹುದ್ದೆಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗದೆ ಇರುವುದರಿಂದ, ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿದೆ ಎಂದು ಘೋಷಿಸಲು ಸಾಧ್ಯವಿರುವುದಿಲ್ಲ. ಆದುದರಿಂದ, ಸದರಿ ಅಧಿಕಾರಿಯವರ ಪರಿವೀಕ್ಷಣಾ ಅವಧಿಯನ್ನು ಎರಡು ವರ್ಷಗಳ ಪರಿವೀಕ್ಷಣಾ ಅವಧಿ ಮುಗಿದ ದಿನಾಂಕದಿಂದ ದಿನಾಂಕ 17.05.2006 ರಿಂದ 22.05.2006ರವರೆಗೆ ಕರ್ನಾಟಕ ಸರ್ಕಾರಿ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(II)ರ ರೀತ್ಯಾ ವಿಸ್ತರಣೆ ಮಾಡಬಹುದಾಗಿದೆ ಎಂದು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಮೇಲೆ (2)ರಲ್ಲಿ ಓದಲಾದ ಪತ್ರಗಳಲ್ಲಿ ಕೋರಿರುತ್ತಾರೆ.

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 322 ಪಿಪಿಇ 2007, ಬೆಂಗಳೂರು, ದಿನಾಂಕ: 9ನೇ ಆಗಸ್ಟ್ 2007**

ಮೇಲೆ ವಿವರಿಸಿದ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವೆಗಳು (ಪರಿವೀಕ್ಷಣಾ) ನಿಯಮಗಳು 1977ರ 4ನೇ ನಿಯಮದ ಉಪ ನಿಯಮ (1)ರನ್ವಯ ಶ್ರೀಮತಿ ಎಂ.ಎನ್. ಉಷಾ, ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ನಂಜನಗೂಡು, ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 17.05.2006 ರಿಂದ 22.05.2006ರವರೆಗೆ ವಿಸ್ತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಪಿ.ಆರ್. 1493

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ ಮತ್ತು ಸು ಹಾಗೂ ಕಾಫಿಪೋಸ ಮತ್ತು ಅಭಿಯೋಗ).

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ವಿಷಯ:** ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರ ಮತ್ತು ಸದಸ್ಯರುಗಳ ಸಂಭಾವನೆಯನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಲಾ 62 ಎಲ್ ಎಂ ಪಿ 89, ದಿನಾಂಕ:11.3.1992.
2) ಸರ್ಕಾರದ ಆದೇಶ ಸಂಖ್ಯೆ:ಸಂವ್ಯಶಾಇ 10 ಭಾನಿವಿ 2002, ದಿನಾಂಕ:22.4.2002.
3) ಸರ್ಕಾರದ ಆದೇಶ ಸಂಖ್ಯೆ:ಸಂವ್ಯಶಾಇ 44 ಭಾನಿವಿ 2005, ದಿನಾಂಕ:3.12.2005.
4) ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ:ಭಾನಿ 74/ಆಡಳಿತ/ರಾಭಾ(ವಿ)/2005, ದಿನಾಂಕ: 29.3.2007.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರಿಗೆ ಪ್ರತಿ ದಿನ ರೂ.150.00 ರಂತೆ ಗರಿಷ್ಟ ತಿಂಗಳಿಗೆ ರೂ.3,000.00 ಹಾಗೂ ಸದಸ್ಯರಿಗೆ ಪ್ರತಿ ದಿನ ರೂ.100.00 ರಂತೆ ಗರಿಷ್ಠ ತಿಂಗಳಿಗೆ ರೂ.2,500.00 ಗಳ ಸಂಭಾವನೆಯನ್ನು ನಿಗದಿಪಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರಿಗೆ ಪ್ರತಿ ದಿನ ರೂ.250.00 ರಂತೆ ಗರಿಷ್ಠ ತಿಂಗಳಿಗೆ ರೂ.5,000.00 ಹಾಗೂ ಸದಸ್ಯರಿಗೆ ಪ್ರತಿ ದಿನ ರೂ.200.00 ರಂತೆ ಗರಿಷ್ಠ ತಿಂಗಳಿಗೆ ರೂ.4,000.00 ಗಳ ಸಂಭಾವನೆಯನ್ನು ನಿಗದಿಪಡಿಸಲಾಗಿದೆ.

ಮೇಲೆ (3) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಉಪಾಧ್ಯಕ್ಷರಿಗೆ ಪ್ರತಿ ದಿನ ರೂ.250.00 ರಂತೆ ಗರಿಷ್ಠ ತಿಂಗಳಿಗೆ ರೂ.4,500.00 ಗಳ ಸಂಭಾವನೆಯನ್ನು ನಿಗದಿಪಡಿಸಲಾಗಿದೆ.

ಮೇಲೆ (4)ರಲ್ಲಿ ಓದಲಾದ ಭಾಷಾಂತರ ನಿರ್ದೇಶಕರ ಪತ್ರದಲ್ಲಿ ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರ ಮನವಿ ದಿನಾಂಕ:9.3.2007ರಲ್ಲಿ ಕೋರಿರುವಂತೆ ಆಯೋಗದ ಅಧ್ಯಕ್ಷರಿಗೆ ಪ್ರತಿ ದಿನ ರೂ.600.00 ರಂತೆ ಗರಿಷ್ಠ ತಿಂಗಳಿಗೆ ರೂ.12,000.00 ಹಾಗೂ ಸದಸ್ಯರಿಗೆ ಪ್ರತಿ ದಿನ ರೂ.500.00 ರಂತೆ ಗರಿಷ್ಠ ತಿಂಗಳಿಗೆ ರೂ.10,000-00ಗಳ ಸಂಭಾವನೆಯನ್ನು ನಿಗದಿಪಡಿಸಲು ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಅಧ್ಯಕ್ಷರು ಹಾಗೂ ಸದಸ್ಯರುಗಳ ಸಂಭಾವನೆಯನ್ನು ಪರಿಷ್ಕರಿಸಲು ನಿರ್ಣಯಿಸಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಸಂವ್ಯಶಾಇ 36 ಭಾನಿವಿ 2007, ಬೆಂಗಳೂರು, ದಿನಾಂಕ: 17ನೇ ಆಗಸ್ಟ್ 2007**

ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರಿಗೆ ದಿನ ಒಂದಕ್ಕೆ ರೂ.300.00 ರಂತೆ ಗರಿಷ್ಠ ತಿಂಗಳಿಗೆ ರೂ.7,000.00 ಹಾಗೂ ಸದಸ್ಯರಿಗೆ ದಿನವೊಂದಕ್ಕೆ ರೂ.250.00 ರಂತೆ ಗರಿಷ್ಠ ತಿಂಗಳಿಗೆ ರೂ.5,500.00 ಗಳ ಸಂಭಾವನೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಿಗದಿಪಡಿಸಲಾಗಿದೆ.

ಈ ಆಯೋಗಕ್ಕೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2052-ಸಚಿವಾಲಯ-ಸಾಮಾನ್ಯ ಸೇವೆ-092-08-ಭಾಷಾಂತರ ನಿರ್ದೇಶಕರು-ರಾಜಭಾಷಾ (ವಿಧಾಯೀ) ಆಯೋಗ-(ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 674 ವೆಚ್ಚ-7/2007 ದಿನಾಂಕ:02-08-2007ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ಶ್ರೀಧರ್**

ಪಿ.ಆರ್. 1494

ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

## ENERGY SECRETARIAT

**Sub :** Transfer of 1.5 MW Wind Power Capacity (Wind Mill Project) in favour of M/s Indian Designs-reg.

**Read :**
1) Government Order No. DE 26 NCE 1999 dated 13.5.1999.
2) Government Order No. EN 61 NCE 2005 dated 13.4.2005.
3) Letter No: KRED/08/ID-SEL/2007/1607 dated: 18.7.2007 received from the Managing Director, Karnataka Renewable Energy Development Limited, Bangalore.

**Preamble:**

In the Government Order dated: 13.4.2005 read at (2) above, sanction has been accorded for implementation of 55.00 MW capacity Wind Power Project (Wind Mill Project) at Gadag district to M/s Suzlon Energy Limited.

Now, the Managing Director, Karnataka, Renewable Energy Development Limited, Bangalore in his letter dated: 18.7.2007 read at (3) above, has recommended to the Government for transfer of 1.5 MW Wind Power capacity (Wind Mill Project) in favour of M/s Indian Designs from out of sanctioned 55.00 MW Wind Power Capacity to M/s Suzlon Energy Limited at Keluru village, Kappatagudda wind zone, Mundargi Taluk, Gadag District.

The proposal has been examined at the Government level and hence the order:-

**Government Order No: EN 260 NCE 2007, Bangalore, Dated: 30th July 2007**

Government accords approval for transfer of 1.5 MW Wind Power capacity (Wind Mill Project) in favour of M/s Indian Designs from out of sanctioned 55.00 MW Wind Power Capacity to M/s Suzlon Energy Limited at Keluru village, Kappatagudda wind zone, Mundargi Taluk, Gadag District.

The terms and conditions of the Government Order read at (1) above shall **IPSO FACTO** applicable.

By Order and in the name of the Governor of Karnataka,

**SURESH.B.KRISHNAPPANAVAR**

P.R. 1495

Under Secretary to Government,
Energy Department.

## ಇಂಧನ ಸಚಿವಾಲಯ

**ವಿಷಯ:** ಮೆ:: ಶಕುಂತಲಂ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಮಾಗುಂದಿ ಕಿರು ಜಲ ವಿದ್ಯುತ್ ಯೋಜನೆಯನ್ನು 9.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 138 ಎನ್‌ಸಿಇ 2006 ದಿನಾಂಕ:21.04.2006.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ:ಕೆಆರ್‌ಇಡಿ/06/ಮಾಗುಂದಿ/2007/1688 ದಿನಾಂಕ: 29.5.2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಮೆ:: ಶಕುಂತಲಂ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಮುಡಿಗೆರೆ ತಾಲ್ಲೂಕಿನ ಮಾಗುಂದಿ ಗ್ರಾಮದ ಬಳಿ ಅಂದಾಜು 14 ಕಿ.ಮೀ. ಬಾಳೆಹೊನ್ನೂರು ಪಟ್ಟಣದಿಂದ ಕಳಶಾ ರಸ್ತೆ ಕಡೆಗೆ ಭದ್ರಾ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಮಾಗುಂದಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಯೋಜನಾ ಸ್ಥಳದಲ್ಲಿ ಇನ್ನೂ ಹೆಚ್ಚಿನ ವಿದ್ಯುತ್ ಉತ್ಪಾದಿಸಬಹುದೆಂದು ಅಭಿವೃದ್ಧಿದಾರರು ತಿಳಿಸಿರುವುದರ ಹಿನ್ನೆಲೆಯಲ್ಲಿ ಮಾಗುಂದಿ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 2.00 ಮೆಗಾ ವ್ಯಾಟ್‌ನಿಂದ 9.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 267 ಎನ್‌ಸಿಇ 2007, ಬೆಂಗಳೂರು, ದಿನಾಂಕ: 13ನೇ ಆಗಸ್ಟ್ 2007**

ಸರ್ಕಾರವು ಮೆ:: ಶಕುಂತಲಂ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಮುಡಿಗೆರೆ ತಾಲ್ಲೂಕಿನ ಮಾಗುಂದಿ ಗ್ರಾಮದ ಬಳಿ ಅಂದಾಜು 14 ಕಿ.ಮೀ. ಬಾಳೆಹೊನ್ನೂರು ಪಟ್ಟಣದಿಂದ ಕಳಶಾ ರಸ್ತೆ ಕಡೆಗೆ ಭದ್ರಾ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಮಾಗುಂದಿ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 9.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್.ಬಿ.ಕೃಷ್ಣಪ್ಪನವರ್**

ಪಿ.ಆರ್. 1496 ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ:** ದಿ ಪಾವಗಡ ಸೌಹಾರ್ದ ಕ್ರೆಡಿಟ್ ಕೋ-ಆಪರೇಟಿವ್ ಲಿ., ಪಾವಗಡ ಈ ಸಂಸ್ಥೆಗೆ ಚೀಟಿ ವ್ಯವಹಾರ ಪ್ರಾರಂಭಿಸಲು ಚೀಟಿ ನಿಧಿ ಅಧಿನಿಯಮದಡಿ ವಿನಾಯಿತಿ ನೀಡುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ಜಂಟಿ ನಿಬಂಧಕರು (ಕಾನೂನು ಕೋಶ) ಇವರ ಪತ್ರದ ಸಂಖ್ಯೆ: ಎನ್‌ಎಂಎಲ್/ವೈಎಂಸಿ/154/2006-07 ದಿನಾಂಕ: 08.03.2007 ಮತ್ತು 21.06.2007.

**ಪ್ರಸ್ತಾವನೆ:**

ದಿ ಪಾವಗಡ ಸೌಹಾರ್ದ ಕ್ರೆಡಿಟ್ ಕೋ-ಆಪರೇಟಿವ್ ಲಿ., ಕುವೆಂಪು ರಸ್ತೆ, ಪಾವಗಡ ಈ ಸಂಸ್ಥೆ ಚೀಟಿ ವ್ಯವಹಾರ ಪ್ರಾರಂಭಿಸಲು ಅನುಮತಿ ಕೋರಿ ದಿನಾಂಕ:10.02.2006ರ ಮನವಿಯನ್ನು ಸಹಕಾರ ಸಂಘಗಳ ನಿಬಂದಕರಿಗೆ ಸಲ್ಲಿಸಿದ್ದು ಸದರಿ ಮನವಿಯನ್ನು ಸಹಕಾರ ಸಂಘಗಳ ನಿಬಂಧಕರು ಪರಿಶೀಲಿಸಿ ಸದರಿ ಸಂಸ್ಥೆಯು ದಿನಾಂಕ: 31.03.2006ರ ಅಂತ್ಯಕ್ಕೆ ರೂ.49.18 ಲಕ್ಷ ಷೇರು ಬಂಡವಾಳ ಹೊಂದಿ ರೂ.4.90 ಕೋಟಿ ವಹಿವಾಟು ನಡೆಸಿ ರೂ.23.53 ಲಕ್ಷಗಳ ನಿವ್ವಳ ಲಾಭಗಳಿಸಿದ್ದು ಸಂಘದ ಬೈಲಾ ಸಂಖ್ಯೆ. 5,7 ರನ್ವಯ ಚೀಟಿ ವ್ಯವಹಾರ ನಡಸಲು ಅವಕಾಶವಿದ್ದು ಚೀಟಿ ವ್ಯವಹಾರವನ್ನು ನೋಡಿಕೊಳ್ಳಲು ಫೋರ್‌ಮನ್ ನೇಮಕದ ಠರಾವು ಮಾಡಿಕೊಂಡಿದ್ದು ಸಂಘವು ಆರ್ಥಿಕವಾಗಿ ಸದೃಢವಾಗಿದ್ದು ಹಾಗೂ ಬೆಂಗಳೂರು ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ಜಯನಗರ ಬೆಂಗಳೂರು ಮತ್ತು ಉದಯ ಸೌಹಾರ್ದ ಪತ್ತಿನ ಸಹಕಾರಿ ನಿಯಮಿತ, ಬನಶಂಕರಿ, ಬೆಂಗಳೂರು ಇವು ಸಮರ್ಪಕವಾಗಿ ಚೀಟಿ ವ್ಯವಹಾರ ನಡೆಸುತ್ತಿದ್ದು ಈ ಸಂಘವು ಇನ್ನೂ ಹೆಚ್ಚಿನ ಸೇವೆ ಒದಗಿಸುವ ದೃಷ್ಠಿಯಿಂದ ಚೀಟಿ ವ್ಯವಹಾರ ನಡೆಸಲು ಉದ್ದೇಶಿಸಿದ್ದು ಸದರಿ ಸಂಸ್ಥೆಗೆ ಚೀಟಿ ನಿಧಿ ಅಧಿನಿಯಮ 1982ರ ಪ್ರಕರಣ 12(1)ರಿಂದ ವಿನಾಯಿತಿ ನೀಡಬಹುದಾಗಿದೆ ಎಂದು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಓ 09 ಸಿಎಂಎಲ್ 2007, ಬೆಂಗಳೂರು, ದಿನಾಂಕ: 25ನೇ ಜುಲೈ 2007**

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಚೀಟಿನಿಧಿಗಳ ಅಧಿನಿಯಮ 1982ರ ಪ್ರಕರಣ 12(1)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ದಿ ಪಾವಗಡ ಸೌಹಾರ್ದ ಕ್ರೆಡಿಟ್ ಕೋ-ಆಪರೇಟಿವ್ ಲಿ., ಪಾವಗಡ ಈ ಸಂಸ್ಥೆಯು ಸದರಿ ಐಟಂನ ಉಪಬಂಧದಿಂದ ಮುಂದಿನ ಆದೇಶದವರೆಗೆ ಚೀಟಿ ವ್ಯವಹಾರ ನಡೆಸಲು ವಿನಾಯಿತಿ ಪಡೆದಿರುತ್ತದೆ ಎಂದು ನಿಗದಿಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1497 ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

## ತಿದ್ದುಪಡಿ ಆದೇಶ

**ಸಂಖ್ಯೆ: ಸಿಓ 09 ಸಿಎಲ್‌ಎಂ 2007, ಬೆಂಗಳೂರು, ದಿನಾಂಕ: 26ನೇ ಜುಲೈ 2007**

ಸರ್ಕಾರದ ಆದೇಶ ಸಂಖ್ಯೆ: ಸಿಓ 9 ಸಿಎಲ್‌ಎಂ 2007 ದಿನಾಂಕ:08.03.2007ರ ಆದೇಶ ಭಾಗದ ಷರತ್ತುಗಳ ಸಂಖ್ಯೆ: 03 ಅನ್ನು ಈ ಕೆಳಗಿನಂತೆ ಮಾರ್ಪಡಿಸಿದ್ದು;

ಮೇಲಿನ ಪ್ರವರ್ಗಗಳಿಗೆ ಪಟ್ಟಣ ಸಹಕಾರ ಬ್ಯಾಂಕುಗಳು ಶಾಖೆಗಳನ್ನು ಹೊಂದಿದ್ದಲ್ಲಿ ಶಾಖೆಗಳ ಲೆಕ್ಕಪರಿಶೋಧನಾ ಕೆಲಸ ಮತ್ತು ಕ್ರೋಢೀಕರಣಗೊಳಿಸುವ ಪರಿಶೀಲನಾ ಕಾರ್ಯ ಮುಂತಾದ ಅಂಶಗಳನ್ನು ಪರಿಗಣಿಸಿ ಪ್ರತಿ ಶಾಖೆಗೆ ರೂ.12,000/-ಗಳಂತೆ ಶಾಖೆಗಳ ಸಂಖ್ಯೆಗನುಗುಣವಾಗಿ ಬ್ಯಾಂಕುಗಳು ಹೆಚ್ಚಿನ ಸಂಭಾವನೆ/ಶುಲ್ಕವನ್ನು 2006-07ನೇ ಸಾಲಿನಿಂದ ಚಾರ್ಟರ್ಡ್ ಅಕೌಂಟೆಂಟ್‌ರಿಗೆ ನೇರವಾಗಿ ಪಾವತಿಸತಕ್ಕದ್ದು." ಅದರಂತೆ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1498 ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಗ್ರಾಮ ಸಹಾಯಕರುಗಳಿಗೆ ಜುಲೈ-07 ರಿಂದ ಮಾರ್ಚ್ 2008ರವರೆಗೆ ವೇತನ ನೀಡುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ ಕಂಇ 94 ಎಂಎಸ್.ಟಿ 2007, ದಿನಾಂಕ: 19.05.2007.
2. ಸರ್ಕಾರದ ಆದೇಶ ಸಂಖ್ಯೆ ಕಂಇ 01 ಬಿಎಸ್‌ಸಿ 2007, ದಿನಾಂಕ: 10.07.2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂ.(1)ರಲ್ಲಿನ ಸರ್ಕಾರದ ಆದೇಶದಲ್ಲಿ ಮಿತ ವೇತನ (ಸ್ಟೈಪೆಂಡರಿ) ಗ್ರಾಮ ಸಹಾಯಕರಾಗಿ ಕಾರ್ಯ ನಿರ್ವಹಿಸುತ್ತಿರುವ ಒಟ್ಟು 9625 ಗ್ರಾಮ ಸಹಾಯಕರುಗಳಿಗೆ ದಿನಾಂಕ: 1.4.2007 ರಿಂದ 30.6.2007ರ ಅವಧಿಗೆ (3 ತಿಂಗಳ) ಮಾಸಿಕ ಸಂಭಾವನೆ ತಲಾ ರೂ.2000/-ರಂತೆ ಒಟ್ಟು ರೂ.577.50 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ಸರ್ಕಾರಿ ಆದೇಶದಲ್ಲಿ ಈಗಾಗಲೇ ಮಂಜೂರಾಗಿರುವ 10450 ಗ್ರಾಮ ಸಹಾಕರ ಹುದ್ದೆಗಳನ್ನು ಮಾಸಿಕ ಮಿತ ವೇತನ ರೂ.2000/-ಗಳಂತ (ರೂಪಾಯಿ ಎರಡು ಸಾವಿರ ಮಾತ್ರ) ಗಳಂತೆ ಮಿತ ವೇತನ ಆಧಾರದ ಮೇಲೆ ಖಾಯಂ ಆಗಿ ಮುಂದುವರೆಸಿ ಆದೇಶಿಸಿದೆ.

9599 ಗ್ರಾಮ ಸಹಾಯಕರುಗಳಿಗೆ ಜುಲೈ 2007 ರಿಂದ ಮಾರ್ಚ್ 2008 (9 ತಿಂಗಳು) ಮಾಸಿಕ ತಲಾ ರೂ.2000/- ರಂತೆ ರೂ.17,27,82,000ಗಳನ್ನು ಬಿಡುಗಡೆ ಮಾಡಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ.ಕಂಇ 94 ಎಂಎಸ್‌ಟಿ 2007, ಬೆಂಗಳೂರು, ದಿನಾಂಕ: 10ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಕಾಣಿಸಿರುವ ರೀತ್ಯಾ ರಾಜ್ಯದ ಕಂದಾಯ ಇಲಾಖೆಯಲ್ಲಿ ಮಿತ ವೇತನ (ಸ್ಟೈಫೆಂಡರಿ) ಗ್ರಾಮ ಸಹಾಯಕರಾಗಿ ಕೆಲಸ ನಿರ್ವಹಿಸುತ್ತಿರುವ 9599 ಗ್ರಾಮ ಸಹಾಯಕರುಗಳಿಗೆ ದಿನಾಂಕ: 1.7.2007 ರಿಂದ ದಿನಾಂಕ:31.3.2008ರ ಅವಧಿಗೆ (9 ತಿಂಗಳಿಗೆ ಮಾತ್ರ) ಮಾಸಿಕ ಸಂಭಾವನೆ ತಲಾ ರೂ. 2000/-ಗಳಂತೆ ಪಾವತಿಸಲು ಒಟ್ಟು ರೂ.17,27,82,000 ಲಕ್ಷಗಳನ್ನು (ರೂಪಾಯಿ ಹದಿನೇಳು ಕೋಟಿ ಇಪ್ಪತ್ತೇಳು ಲಕ್ಷದ ಎಂಭತ್ತೆಂಟು ಸಾವಿರಗಳು ಮಾತ್ರ) ಎಲ್ಲಾ ಜಿಲ್ಲಾಧಿಕಾರಿಗಳಿಗೆ ಈ ಕೆಳಕಂಡಂತೆ ಷರತ್ತು ವಿಧಿಸಿ ಬಿಡುಗಡೆ ಮಾಡಲಾಗಿದೆ.

1. ಹಾಲಿ ಲಭ್ಯವಿರುವ ಅನುದಾನದಿಂದ ಅನುಬಂಧದಲ್ಲಿ ಕಾಣಿಸಿರುವಂತೆ 17,27,82,000 ಗಳನ್ನು ಜುಲೈ 2007ರ ಮಾಹೆಯಿಂದ ಮಾರ್ಚ 2008ರ ಮಾಹೆಯವರೆವಿಗೆ ಗ್ರಾಮ ಸಹಾಯಕರುಗಳಿಗೆ ಸಂಭಾವನೆ ಪಾವತಿಸಲು ಅನುಕೂಲವಾಗುವಂತೆ ಎಲ್ಲಾ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಿದೆ.
2. ಮಾರ್ಚ 2008ರ ಸಂಭಾವನೆಯನ್ನು ಅದೇ ಮಾಹೆಯಲ್ಲಿ ಡ್ರಾ ಮಾಡಿ ವಿತರಿಸಿ ಅನುದಾನ ಲ್ಯಾಪ್ಸ್ ಆಗದಂತೆ ಎಚ್ಚರ ವಹಿಸಲು ಜಿಲ್ಲಾಧಿಕಾರಿಗಳಿಗೆ ಸೂಚನೆ ನೀಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2029-00-101-1-01-015ರ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996ರ ಕಂಡಿಕೆ 3ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ನರಸಿಂಹಲು**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ.ಸು.ಕೋ.)

**ಸರ್ಕಾರಿ ಆದೇಶದ ಕ್ರಮಾಂಕ ಕಂಇ 94 ಎಂಎಸ್‌ಟಿ 2007, ದಿನಾಂಕ: 10.08.2007ಕ್ಕೆ ಅನುಬಂಧ**

| ಕ್ರ. ಸಂ. | ಜಿಲ್ಲೆಯ ಹೆಸರು | ಗ್ರಾಮ ಸಹಾಯಕರ ಸಂಖ್ಯೆ | 1.07.2007 ರಿಂದ 31.3.2008 ರ ವರೆವಿಗೆ ಮಾಸಿಕ 2000/- ರೂ ನಂತೆ ಬಿಡುಗಡೆ ಮಾಡಲಾದ ಅನುದಾನ (ರೂಗಳಲ್ಲಿ) |
|---|---|---|---|
| 1. | ಬೆಂಗಳೂರು ನಗರ | 191 | 3438000 |
| 2. | ಬೆಂಗಳೂರು ಗ್ರಾಮಾಂತರ | 424 | 7632000 |
| 3. | ಬೆಳಗಾವಿ | 727 | 13086000 |
| 4. | ಬಳ್ಳಾರಿ | 402 | 7236000 |
| 5. | ಬೀದರ್ | 342 | 6156000 |
| 6. | ಬಿಜಾಪುರ | 337 | 6066000 |
| 7. | ಬಾಗಲಕೋಟೆ | 348 | 6264000 |
| 8. | ಚಿಕ್ಕಮಗಳೂರು | 226 | 4068000 |
| 9. | ಚಿತ್ರದುರ್ಗ | 330 | 5940000 |
| 10. | ಚಾಮರಾಜನಗರ | 239 | 4302000 |
| 11. | ದಕ್ಷಿಣ ಕನ್ನಡ | 345 | 6210000 |
| 12. | ಧಾರವಾಡ | 223 | 4014000 |
| 13. | ದಾವಣಗೆರೆ | 278 | 5004000 |
| 14. | ಗುಲ್ಬರ್ಗಾ | 650 | 11700000 |
| 15. | ಗದಗ | 194 | 3492000 |
| 16. | ಹಾಸನ | 437 | 7866000 |
| 17. | ಹಾವೇರಿ | 370 | 6660000 |
| 18. | ಕೊಡಗು | 121 | 2178000 |
| 19. | ಕೋಲಾರ | 507 | 9126000 |
| 20. | ಕೊಪ್ಪಳ | 216 | 3888000 |

| ಕ್ರ. ಸಂ. | ಜಿಲ್ಲೆಯ ಹೆಸರು | ಗ್ರಾಮ ಸಹಾಯಕರ ಸಂಖ್ಯೆ | 1.07.2007 ರಿಂದ 31.3.2008 ರ ವರೆವಿಗೆ ಮಾಸಿಕ 2000/- ರೂ ನಂತೆ ಬಿಡುಗಡೆ ಮಾಡಲಾದ ಅನುದಾನ (ರೂಗಳಲ್ಲಿ) |
|---|---|---|---|
| 21. | ಮಂಡ್ಯ | 494 | 8892000 |
| 22. | ಮೈಸೂರು | 466 | 8388000 |
| 23. | ರಾಯಚೂರು | 334 | 6012000 |
| 24. | ಶಿವಮೊಗ್ಗ | 161 | 2898000 |
| 25. | ತುಮಕೂರು | 637 | 11466000 |
| 26. | ಉಡುಪಿ | 223 | 4014000 |
| 27. | ಉತ್ತರ ಕನ್ನಡ | 377 | 6786000 |
| | **ಒಟ್ಟು** | **9599** | **172782000** |

**ಎಂ.ಕೆ. ನರಸಿಂಹಲು**
ಪಿ.ಆರ್. 1499 ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಸುಧಾರಣಾ ಕೋಶ)

**ತಿದ್ದೋಲೆ**

**ನಂ. ಕಂ.ಇ. 44 ಎಂ.ಎಸ್.ಟಿ. 07, ಬೆಂಗಳೂರು, ದಿನಾಂಕ: 8ನೇ ಆಗಸ್ಟ್ 2007**

ಇದೇ ಸಂಖ್ಯೆಯ ಸರ್ಕಾರಿ ಆದೇಶ ಸಂಖ್ಯೆ: ಕಂ.ಇ. 44 ಎಂ.ಎಸ್.ಟಿ. 07, ದಿನಾಂಕ: 08.05.2007ರ ಆದೇಶದ ವಿಷಯ ಭಾಗದಲ್ಲಿ ಹಾಗೂ ಪ್ರಸ್ತಾವನೆಯ ಭಾಗದ ಕಂಡಿಕೆ 1ರ 6ನೇ ಸಾಲಿನಲ್ಲಿರುವ ಮತ್ತು ಆದೇಶ ಭಾಗದ ಕಂಡಿಕೆ 2ರ 2ನೇ ಸಾಲಿನಲ್ಲಿರುವ **"ಸಾಮಾಜಿಕ ಭದ್ರತೆ ಮತ್ತು ವೇತನಗಳ ನಿರ್ದೇಶನಾಲಯ"** ಎಂಬ ಪದದ ಬದಲಾಗಿ **"ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು. ಇತರೆ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಕೆ. ನರಸಿಂಹಲು**
ಪಿ.ಆರ್. 1500 ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಕಂದಾಯ)

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ:ಒಇ 158 ಪೊಸಿಪ 2007, ಬೆಂಗಳೂರು, ದಿನಾಂಕ: 10ನೇ ಆಗಸ್ಟ್ 2007**

ಸರ್ಕಾರದ ಆದೇಶ ಸಂಖ್ಯೆ:ಒಇ 112 ಪೊಸಿಪ 2007 ದಿನಾಂಕ:14.06.2007 ಆದೇಶದಲ್ಲಿ **"ಒಇ 112 ಪೊಸಿಪ 2007"** ಎಂಬುದರ ಬದಲಾಗಿ **"ಒಇ 158 ಪೊಸಿಪ 2007"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಪಿ.ಆರ್. 1501 ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PLANNING AND STATISTICS SECRETARIAT**

**Sub:** Setting up District and State level Task Forces for preparation of Comprehensive State Plan for Agriculture.

**Read:** 1) Resolution of 53rd NDC meeting on Agricultural Strategy for the 11th Plan held at New Delhi on 29.05.07.
2) G.O. No. PD 15 PMM 2007, dated: 2nd July 2007.

**Preamble:**

The National Developmental; Council in its 53rd meeting held on 29th May 2007, has reaffirmed its commitment to achieve the goal of annual growth rate 4% in the agricultural sector. To achieve this goal State Government constituted a Steering Committee under the chairmanship of ACS Development Commissioner for preparation of a Comprehensive State Plan for Agriculture Development, vide G.O. referred at (2) above. The Steering Committee in its meeting held on 11.07.2007 decided to constitute a task force at District Level for formulating a comprehensive district agriculture plan for each district under the chairmanship of Chief Executive Officer of the ZP and Chief Planning Officer of ZP as Member Secretary nd other district officers of Agriculture & allied departments and representatives of Agricultural research stations / Krishi Vignyana Kendras as members of the District Level Task Force. It was also decided in the Steering Committee to constitute a State Level Task Force for scrutiny of the District

Comprehensive Agricultural plans & reparing State Level Agricultre Production Plan under the chairmanship of Principal Secretary, Agriculture Department with Principal Secretary / Secretary for Horticulture, Animal Husbandry & VS, Water Resources, Minor Irrigation, Co-operation, RD & PR, Planning, Finance, Sericulture and Vice-Chancellors of both the Agriculture Universities as members.

The District Lvel Task Force should formulate a District Comprehensive Agriculture Plan, fully utilizing the available resources from all the existing schemes of Central / State schemes and other district level schemes such as BRGF and NREG. The District Comprehensive Agricultre Plan (DCAP) should include the programmes of allied departments like, AH & VS, Fisheries, Horticulture, Sericulture, Water Resources, Minor Irrigation, Watershed Development, RD & PR and Co-operation. The District Level Task Force shall submit the DCAP to the Planning Department for scrutiny which in turn to be placed before the State Level Task Force for preparing Agriculture Production Plan.

The State Govt., after examining the recommendations of the National Developmental Council and Sterring Committee is pleased to issue the following order.

**Government Order No. PD 15 PMM 2007, Bangalore, Dated: 31st July 2007**

In the circumstances explained in the preamble, the Govt. of Karnataka accords approval for setting up of District Level Task Force in each District for formulation of District Comprehensive Agricultural Production Plan (DCAP) and State Level Task Force for formulating Comprehesive Agriculture Production Plan at state level.

The Composition of the Task Forces is as follows:-

**District Level Task Force**

| | | | |
|---|---|---|---|
| 1. | Chief Executive Officer of Z.P. | - | Chairman |
| 2. | Chief Planning Officer of Zilla Panchayath | - | Member Secretary |
| 3. | Districts level officers of Agriculture, Horticulture, Co-operation, Animal Husbandry, Rural Development and Panchayat Raj, Fisheries, Sericulture, Water Resources, Minor Irrigation and Watershed Development Departments | - | Members |
| 4. | Representatives of Agriculture Research Station / Krishi Vignyan Kendra of the respective district. | - | Members |

**State Level Task Force**

| | | | |
|---|---|---|---|
| 1. | Principal Secretary, Agriculture Dept. | - | Chairman |
| 2. | Principal Secretaries / Secretaries / of, Horticulture, Co-operation, Animal Husbandry, Rural Development and Panchayat Raj, Fisheries, Sericulture, Water Resources, Minor Irrigation and Watershed, Planning, Finance | - | Members |
| 3. | Vice-Chancellors of Agriculture University Bangalore & Dharwad | - | Members |
| 4. | Commissioner / Director of Agriculture / Horticulture Dept. | - | Members |

The terms of Reference of the District & State Level Task Forcers would be as follows:-

1) District Level Task Force shall formulate District Comprehensive Agriculture Plan (DCAP) for each district by utilising available resources from all the existing schemes of Central / State and other District level schemes such as BRGF NREG.

2) The DCAP shall also include the programmes of allied departments like Horticulture, AH & VS, Fisheries, Sericulture, Minor Irrigation, Watershed Development, Water Resources, RD & PR and Co-operation.
3) The District Task Force shall submit the DCAP within 30th August 2007 to the Planning Department for scrutiny.
4) Planning Department has to scrutinize the DCAP and place the same before the State Level Task Force for preparing Comprehensive State Agriculture Production Plan.
5) The State Level Task Force may appoint the consultants for preparing Comprehensive State Agriculture Production Plan.
6) The Planning Department shall issue the guidelines if necessary to all the CEOs & CPOs of ZP.

By Order and in the name of the Governor of Karnataka,

**B.S. SHIVASWAMY**

P.R. 1502

Under Secretary to Government-1&2,
Planning & Statistics Department.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಕೆ.ಹೆಚ್. ರಾಜಶೇಖರಯ್ಯ ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರನ್ನು ಅಮಾನತ್ತಿನಿಂದ ತೆರವುಗೊಳಿಸಿ ಸೇವೆಗೆ ಪುನರ್ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರದ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಎಂ.42/ಸಿಆರ್-9/2006/ದಾವಣಗೆರೆ ದಿನಾಂಕ:25.09.2006.
2) ಸರ್ಕಾರದ ಆದೇಶ ಸಂಖ್ಯೆ:ವಾಕೈ 315 ಕೈಸೇವಿ 2007, ಬೆಂಗಳೂರು, ದಿನಾಂಕ:13.10.2006.
3) ಶ್ರೀ ಕೆ.ಹೆಚ್. ರಾಜಶೇಖರಯ್ಯ, ಉಪ ನಿರ್ದೇಶಕರು, ಇವರ ಮನವಿ ದಿ:28.05.2007.
4) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರದ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಸಿಟಿಎಲ್-42/ಸಿಆರ್-9/2006 ಡಿವಿಜಿ ದಿನಾಂಕ:21.06.2007.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 25.09.2006ರ ಲೋಕಾಯುಕ್ತರವರ ಪತ್ರದಲ್ಲಿ ಶ್ರೀ ಕೆ.ಹೆಚ್. ರಾಜಶೇಖರಯ್ಯ, ಉಪ ನಿರ್ದೇಶಕರು, ಇವರು ಅಕ್ರಮ ಸಂಭಾವನೆಗೆ ಒತ್ತಾಯಿಸಿ ಸ್ವೀಕರಿಸುವಾಗ ಲೋಕಾಯುಕ್ತರ ದಾಳಿಗೆ ಸಿಲುಕಿಕೊಂಡ ಪ್ರಯುಕ್ತ ದಸ್ತಗಿರಿ ಆದ ದಿನಾಂಕ:29.9.2006 ರಿಂದ ಅಮಾನತ್ತಿನಲ್ಲಿಡುವಂತೆ ಸರ್ಕಾರಕ್ಕೆ ತಿಳಿಸಿದ್ದರು. ಅದರಂತೆ, ಪ್ರಸ್ತಾವನೆಯನ್ನು ಪರಿಶೀಲಿಸಿ ಉಲ್ಲೇಖ (2)ರ ಸರ್ಕಾರಿ ಆದೇಶ ದಿನಾಂಕ:13.10.2006ರಲ್ಲಿ ಶ್ರೀ ಕೆ.ಹೆಚ್. ರಾಜಶೇಖಯ್ಯ, ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ದಾವಣಗೆರೆ, ಇವರನ್ನು ಅಮಾನತ್ತಿನಲ್ಲಿಟ್ಟು ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3) ರಲ್ಲಿ ಸದರಿ ಅಧಿಕಾರಿಯವರು ಸರ್ಕಾರಕ್ಕೆ ಮನವಿ ಸಲ್ಲಿಸಿ ಅವರನ್ನು ಅಮಾನತ್ತಿನಿಂದ ತೆರವು ಮಾಡಿ ಮರು ನೇಮಕಾತಿ ಮಾಡಲು ವಿನಂತಿಸಿದ್ದಾರೆ. ಸದರಿ ಅಧಿಕಾರಿಯ ಮನವಿಯ ಹಿನ್ನೆಲೆಯಲ್ಲಿ ಇವರನ್ನು ಅಮಾನತ್ತಿನಿಂದ ತೆರವು ಮಾಡುವ ಕುರಿತು ಲೋಕಾಯುಕ್ತರವರ ಅಭಿಪ್ರಾಯವನ್ನು ಸರ್ಕಾರದ ಪತ್ರ ದಿನಾಂಕ: 06.06.2007 ರಲ್ಲಿ ಕೋರಲಾಗಿತ್ತು. ಅದರಂತೆ ಲೋಕಾಯುಕ್ತರವರು ತಮ್ಮ ಪತ್ರ ದಿನಾಂಕ: 21.06.2007 ರಲ್ಲಿ ಸದರಿ ಅಧಿಕಾರಿಯನ್ನು ಅಮಾನತ್ತಿನಿಂದ ಬಿಡುಗಡೆ ಮಾಡಿದ್ದಲ್ಲಿ ಪ್ರಕರಣ ನಡೆದ ಸ್ಥಳವನ್ನು ಹೊರತುಪಡಿಸಿ ಬೇರೆ ಸ್ಥಳದಲ್ಲಿ ನೇಮಕ ಮಾಡಲು ತಮ್ಮ ಅಭಿಪ್ರಾಯವನ್ನು ಸೂಚಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 35 ಕೈಸೇವಿ 2007, ಬೆಂಗಳೂರು, ದಿನಾಂಕ: 13ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಈ ಪ್ರಕರಣವನ್ನು ಸರ್ಕಾರವು ಪರಿಶೀಲಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10 (5) (ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಕೆ.ಹೆಚ್. ರಾಜಶೇಖರಯ್ಯ, ಉಪ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ದಾವಣಗೆರೆ, ಇವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ/ಕ್ರಿಮಿನಲ್ ಮೊಕದ್ದಮೆ ಶಿಸ್ತು ಕ್ರಮಗಳನ್ನು ಕಾಯ್ದಿರಿಸಿ, ಇವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ತೆರವುಗೊಳಿಸಿ ಸೇವೆಗೆ ಪುನರ್ ಸ್ಥಾಪಿಸಿದೆ.

ಅಮಾನತ್ತು ತೆರವುಗೊಳಿಸಿದ ನಂತರ, ಶ್ರೀ ಕೆ.ಹೆಚ್. ರಾಜಶೇಖರಯ್ಯ, ಉಪ ನಿರ್ದೇಶಕರು, ಇವರನ್ನು ಉಪ ನಿರ್ದೇಶಕರು, (ಖಾಗ್ರಾ) ಜಿಲ್ಲಾ ಪಂಚಾಯತ್, ಚಿತ್ರದುರ್ಗ, ಇಲ್ಲಿನ ಖಾಲಿ ಹುದ್ದೆಗೆ ಮುಂದಿನ ಆದೇಶದವರೆಗೆ ಸ್ಥಳ ನಿಯುಕ್ತಿಗೊಳಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್.ಎಸ್. ವಾಸನ್**

ಪಿ.ಆರ್. 1503

ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)